ಪ್ರತಿಭಾ ಗ್ರಂಥಮಾಲೆ, ಧಾರವಾಡ, ವರ್ಷ ೬–ಕಿರಣ ೧

# ಪತಿ

( ಸ್ವತಂತ್ರ ಸಾಮಾಜಿಕ ಕಾದಂಬರಿ )



" ನವಗಿರಿನಂದ "



ಜನೆವರಿ
೧೯೪೯



ಬೆಲೆ
೧—೮—೦

# ಸ ಣ್ಣ ರಿ ಕೆ



ಈಗ ಸ್ತ್ರೀಯರಿಗೆ ಯೋಗ್ಯ ವಿದ್ಯಾಭ್ಯಾಸವು ನ್ಯಾಯವೆನಿಸಲ್ಪಟ್ಟಿದೆ. ನ್ಯಾಯವೇ ಹೌದು. ಆದರೆ ನಿರುದ್ಯೋಗಿಯಾದ ಅಥವಾ ಸಣ್ಣ ಉದ್ಯೋಗದಲ್ಲಿರುವ ಗಂಡನು, ಉದ್ಯೋಗದಲ್ಲಿರುವ ತನ್ನ ಹೆಂಡತಿಯಿಂದ ತನಗೆ ಕುಂದಾಗುವುದೆಂದು ಭಾವಿಸುವ ಉದಾಹರಣೆಗಳು ಕೆಲವೆಡೆ ಕಾಣುತ್ತಿವೆ. ಮಧ್ಯಮ ತರದ ಕುಟುಂಬಗಳಲ್ಲಿಯೇ ಇದು ಹೆಚ್ಚು. ಇಂತಹ ಭಾವನೆಗೆ ಬಲಿಬಿದ್ದು ದುಃಖಭಾಗಿನಿಯಾದ ಉಪಾಧ್ಯಾಯಿನಿಯೊಬ್ಬಳ ಸತ್ಯಾದರ್ಶವನ್ನು ನೋಡಿ, ಈ ಕಾಂಬರಿಯನ್ನು ಕಲ್ಪಿಸಿಕೊಂಡಿದ್ದೇನೆ. ದೊಡ್ಡ ದೊಡ್ಡ ನಗರಗಳಲ್ಲಿ ಇದರೊಳಗಿನ "ಪತಿ" ಯಂತಹರು ಅಪರೂಪವೇನಲ್ಲವೆಂದು ಕೊಂಚ ಕೆದಕಿ ನೋಡಿದರೆ ಗೊತ್ತಾದೀತು. ಪತಿಯೇ ಗತಿಯೆಂದು ತನ್ನ ಶಿಕ್ಷಿಕೆಯ ವೃತ್ತಿಯನ್ನೂ ಅಕ್ಕರೆಯ ತಂದೆತಾಯಿಗಳನ್ನೂ ತೊರೆದು ಪತಿ-ಯೆಡೆಗೆ ಧಾವಿಸಿಬಂದ ಸತಿಗೆ ಅವಳ 'ಪತಿ'ಯು ದುರ್ಗತಿಯನ್ನು ತೋರಿದರೂ ಆ ಸತಿಶಿರೋಮಣಿ ತನ್ನ ಚಾರಿತ್ರ್ಯವನ್ನು ನಿಷ್ಕಳಂಕವಾಗಿಟ್ಟುಕೊಂಡಿದ್ದುದನ್ನು ಕಾದಂಬರಿ ಯುದ್ದಕ್ಕೂ ಕಾಣಬಹುದು.

ಇದನ್ನೆತ್ತಿ ಕನ್ನಡಿಗರ ಕೈಗೊಪ್ಪಿಸಿದವರಾದ ಪ್ರತಿಭಾಗ್ರಂಥಮಾಲೆಯ ಸಂಪಾದಕರಾದ ಶ್ರೀ. ಬಾಲಚಂದ್ರ ಘಾಣೇಕರರಿಗೆ ನಾನು ಅಂತ್ಯಂತ ಕೃತಜ್ಞನು.

ಇತಿ—

"ನವಗಿರಿನಂದ"

# ಪತ್ರಿ!

## ೧

ನನ್ನ ಮದುವೆಯ ವಿಷಯವನ್ನು ಕುರಿತು ನನ್ನ ಹೆತ್ತವರು ಆಲೋಚನೆಗೆ ಬಿದ್ದಿರುವರೆಂಬುದು ನನಗೆ ಗೊತ್ತಾಯಿತು. ಅದು ನನ್ನ ಮನಸ್ಸಿನೊಳಗೆ ಅಡಗಿದ್ದ ಯಾವುದೋ ಒಂದು ಭಾವನೆಯ ತಂತಿಯನ್ನು ಅಲುಗಿಸಿದಂತಾಯಿತು. ಮದುವೆ! ನನಗೂ ಮದುವೆಯಾಗುವುದೆ? ತೀರ ಅಪರಿಚಿತವಾದ ಯಾವುದೋ ಒಂದು ಮನೆಗೆ ನಾನು ಹೋಗಬೇಕಾಗುವುದೆ? ಅಲ್ಲಿಯವರನ್ನು ಗಂಡ, ಅತ್ತೆ, ಮಾವ, ಮೊದಲಾದ ನನ್ನವರನ್ನಾಗಿ ನಾನೆಣಿಸಬೇಕೆ? ನಾನು ಹುಟ್ಟಿ ಹದಿನಾಲ್ಕು ವರ್ಷಗಳ ವರೆಗೆ 'ನನ್ನ ಮನೆಯಿದು' ಎಂದು ತಿಳಿದಿದ್ದ ಈ ಮನೆ, ನನ್ನದಲ್ಲದಾಗುವುದೆ? ಮತ್ತಿಲ್ಲಿದೆ ನನಗೆ ಇಲ್ಲಿಯ ಅಧಿಕಾರ? ಆ ಹೊಸ ಎಡೆಯಲ್ಲಿ ನನ್ನ ಅಧಿಕಾರ ಎಂತು ನೆಲೆಸುವುದೊ! ಎಲ್ಲವೂ ತೀರ ಅಪರಿಚಿತ! ಹೊಚ್ಚ ಹೊಸ ನೆಲವೀಡು! ಹಾ! ಹೆಣ್ಣುಬಾಳಿಗೆ ಇದೆಂತಹ ಹೃದಯ ವೇಧಕವಾದ ಪರಿವರ್ತನೆ! ಈ 'ಮದುವೆ' ಎಂಬ ಹೊಸ್ತಿಲಿನಿಂದ ಈ ಪರಿವರ್ತನೆಗೆ ಹೋಗದ ಹೆಣ್ಣು ಯಾರು? ಯಾರೂ ಇಲ್ಲ. ಮತ್ತೆ ನನಗೆ ಮಾತ್ರ ಅದು ಹೇಗೆ ತಪ್ಪೀತು? ಮದುವೆಯೇ ಬೇಡವೆಂದು ಸುಮ್ಮನೆ ಇರಲಿಕ್ಕಾದೀತೇ ಹೆಣ್ಣು ಜನ್ಮಕ್ಕೆ? ಗಂಡಿನ ಜತೆಯಿಲ್ಲದೆ ಹೆಂಗುಸೊಬ್ಬಳೇ ನಿರಾಧಾರಿಯಾಗಿ ಬಾಳಬಲ್ಲಳೇ ಈ ಜಟಿಲ ಪ್ರಪಂಚದಲ್ಲಿ? ದುಃಸಾಧ್ಯವದು. ಒಂದು ವೇಳೆ ಗಂಡಸರಿಂದಾದಿತೋ ಏನೊ? ಹೆಣ್ಣಾದವಳಿಗೆ ಮಾತ್ರ ಮದುವೆಯೊಂದು ಅನಿವಾರ್ಯ.

ನನಗಾಗ 'ಥರ್ಡ್ ಫಾರಂ'ನ ಪರೀಕ್ಷೆ ಮುಗಿದಿತ್ತು. ನನ್ನ ಮದುವೆಯ ಯೋಚನೆ ನಡೆಯಲಾರಂಭವಾಯಿತೆಂದಮೇಲೆ ಇನ್ನು ಶಾಲೆ ಬಿಡಬೇಕಾದೀತು; ಯಾರಾದರೂ 'ಹುಡುಗಿ ನೋಡುವವರು' ಬಂದಾರು; ನಾನವರ ಇದಿರಿಗೆ ನಡೆತಂದುಕೊಂಡು ನಿಲ್ಲಬೇಕು; ನಾನು ನಾಚುಗೆಯಿಂದ ತೂಗಾಡುತಿರುವಾಗ, ಬಂದವರು ನನ್ನ ಅಂದ-ಚಂದಗಳನ್ನು ತಮ್ಮ ಕಣ್ಣೋಟದಲ್ಲಿ ತೂಗಿ ನೋಡಬೇಕು; ಅವರ ಬಯಕೆಯಂತೆ ನಾನು ಹಾ

ರಡು ಹಾಡಿ, ನನ್ನ ಕೊರಳ ಇನಿಮೆಯನ್ನು ಹರಿಯಿಸಬೇಕು. ಅವರೆಲ್ಲ ಯಾರೋ ಎಂತಹರೋ ಎಲ್ಲಿಯವರೊ! ಹೀಗೆ ಎಲ್ಲೆಲ್ಲಿಂದ ಎಷ್ಟೆಷ್ಟು ವರರು ಬಂದು ಬಂದು, ನನ್ನನ್ನು ನೋಡಿ ನೋಡಿ ಬಸವಣ್ಣನ ಹಾಗೆ ತಲೆ ಕೊಡರಿಕೊಂಡು ಹೋಗಲಿಕ್ಕುಂಟೋ ? ಆಮೇಲೆ 'ಮದುವೆ' ಎಂಬ ಬಾಗಿ ಲಲ್ಲಿ ಜತೆಯಾಗುವುದು ಎಂದಿಗೋ ಯಾರೊಂದಿಗೋ! ಅಷ್ಟರೊಳಗೆ ನನ್ನ ಹೆತ್ತವರ ತಲೆಯಮೇಲೆ ಜರಿಜರಿದು ಬೀಳುವ ಚಿಂತೆಗಳೆಷ್ಟೋ ಕಷ್ಟ ಗಳೆಷ್ಟೋ! ಅಂತೂ ಮದುವೆಯಾದರೆ....?

ತೀರ ಅಪರಿಚಿತನಾದ ಆ 'ಗಂಡ'ನಲ್ಲಿಯೇ ತನ್ನ ಸಂಪೂರ್ಣ ಸುಖ ವನ್ನು ಕಾಣಬೇಕಾಗಿದೆ ಹೆಣ್ಣು! ತವರನ್ನಗಲಿದ ತಬ್ಬಲಿ ಹೆಣ್ಣಿನ ಭವಿಷ್ಯ ವೆಲ್ಲವೂ ಆ ಹೊಸಬನ ಕೈಯೊಳಗೆ. ಆ ಗಂಡನು ಸುಹೃದಯಿಯೂ, ಪ್ರೇಮ ಭಾವಕನೂ ಆದರೆ ಹೆಣ್ಣಿನ ಬಾಳು ಸಗ್ಗವೇ ಆದೀತು; ಇದಕ್ಕೆ ಭಾಧಕವಾದ ಅನೇಕ ಕಾರಣಗಳಲ್ಲಿ, ಯಾವುದಾದರೊಂದು ಕಾರಣದಿಂದ ಆ 'ಪ್ರೇಮ' ಎಂಬುದಿಲ್ಲದಿದ್ದರೆ, ಹೆಣ್ಣಿನ ಆ ಬನ್ನದ ಬಾಳು ಏಳೇಳು ಜನ್ಮಕ್ಕೂ ಬೇಡ! ಅಯ್ಯೋ! ನನ್ನ 'ಮದುವೆ' ಎಂಬ ಈ '?' ಪ್ರಶ್ನಾರ್ಥಕ ಚಿಹ್ನೆಯ ಉತ್ತರ ವೇಂತಿದೆಯೋ! ಇಷ್ಟರವರೆಗೆ ಹುಡುಗಾಟದಲ್ಲಿದ್ದ ನಾನು, ಇನ್ನುಮೇಲೆ ನಿಜವಾದ ಹೆಣ್ಣಿನ ಅವಸ್ಥೆಗೆ ಬೀಳಲಿಕ್ಕಿದ್ದೇನಲ್ಲವೆ?

ಹದಿನಾಲ್ಕನೆಯ ವಯಸ್ಸು ನನಗಾಗ. ಆಗಲೇ ಇಷ್ಟೆಲ್ಲ ಯೋಚನೆ ಮೂಡಿಬಿಟ್ಟಿತ್ತು. ಇದರಿಂದಲೇ ನಾನು ತುಂಬ ಆಲೋಚನೆಯುಳ್ಳವ ಳೆಂದು ನಿಮಗೆ ತೋರಬಹುದು. ಇದ್ದೀತು. ನಮ್ಮ ನೆರೆ-ಕೆರೆಯವರು ನನ್ನನ್ನು ಕುರಿತು— "ಶ್ಯಾಮಯ್ಯನ ಮಗಳು ಗಿರಿಜ, ಬಲು ಬುದ್ಧಿವಂತೆ; ಗೇಣುದ್ದ ಬೆಳೆದಿದ್ದಾಳಷ್ಟೇ, ಆಗಲೇ ಮುದುಕಿಯರ ಯೋಚನೆಗೆ ಮುಟ್ಟಿ ದ್ದಾಳೆ! ಬಹಳ ಗಟ್ಟಿಗಿತ್ತಿ! ಒಳ್ಳೆ ಗಂಡ ಸಿಕ್ಕಲಿ ಅವಳಿಗೆ...." ಎಂದು ಮುಂತಾಗಿ ಮಾತಾಡಿಕೊಂಡುದು ನನ್ನ ಕಿವಿಗೆ ಬಿದ್ದಿದೆ. ಆಲೋಚನೆ ಯನ್ನು ಕೆರಳಿಸಲಿಕ್ಕೆ ಈ ಬಗೆಯ ತುಂಡು ತುಂಡು ಮಾತುಗಳೇ ಕಿವಿಗೆ ಬಿದ್ದರೆ ಸಾಲದೆ?

ಒಂದು ದಿನ ತಾಯಿ ನನ್ನೊಡನೆ ಸ್ಪಷ್ಟವಾಗಿಯೇ ಪ್ರಸ್ತಾಪ ಮಾಡಿ ದಳು. ಅದಕ್ಕೆ ನಾನೇನು ಹೇಳಿಯೇನು? ಸಾಧಾರಣವಾಗಿ ಎಲ್ಲರೂ

ಹೇಳುವಂತೆ— "ಸುಮ್ಮನಿರಮ್ಮ ನೀನು; ಇಷ್ಟು ಬೇಗ ಮದುವೆಯಲ್ಲಿ ನನಗೆ" ಎಂದಂದೆ ಹುಸಿ ಮುನಿಸಿನಿಂದ.

"ಹೋಗೇ ನಿಂಗೇನು ಗೊತ್ತಿದೆ? ನನಗೆ ನೋಡು ಹನ್ನೊಂದನೆಯ ವರ್ಷದಲ್ಲಿಯೇ ಮದುವೆಯಾಗಿದೆ. 'ಶಾರದೆಯ ಬಿಲ್ಲು' ಬಂದಿರುವ ಈಗಿನ ಕಾಲದಲ್ಲಿ ಹುಡುಗಿಗೆ ಎಷ್ಟು ವರ್ಷವಾದರೂ, ಮದುವೆಯಾಗದಿದ್ದರೆ ಜಾತಿ ಹೋದೀತೆಂಬ ಹೆದರಿಕೆ ಇಲ್ಲಂತೆ. ಹಾಗಂತ ಕಾಲಕಾಲಕ್ಕೆ ಆಗುವಂಥಾದ್ದು ಆಗದಿದ್ದರೆ ಆದೀತೆ? ಆದರೆ ಹೇಗಾದೀತೋ! ನಮಗೆ ಈ ಮದರಾಸು ಪರ ವೂರಾಯಿತು; ಇಲ್ಲಿ ಒಳ್ಳೆಯ ವರನನ್ನು ಹುಡುಕುವುದು ಹೇಗೊ ಯಾರು ಬಂದಾರು? ಹುಡುಗಿಯರು ತೀರಾ 'ಅಗ್ಗ'ವಾಗಿ ಹೋಗಿರುವ ಈ ಕಾಲದಲ್ಲಿ ವರಂದಿರೆಲ್ಲ ತುಂಬ 'ಪ್ರಿಯ'ರಾಗಿ ಬೀಗಿದ್ದಾರೆ. ನೀನು ಗಿಳಿಯ ಹಾಗೆ ಮುದ್ದುಮುದ್ದಾಗಿದ್ದರೇನಾಯಿತು? ಬಡವರ ಹುಡುಗಿಗೆ ಬೆಲೆಯಿಲ್ಲ; ಗೌರವವಿಲ್ಲ; ಬರೀ 'ಸಸಾರ!' ಊರಿನಲ್ಲಿ ಹುಡುಕಿದರೆ ಒಳ್ಳೆಯ ವರ ಸಿಕ್ಕ ಬಹುದೋ ಏನೋ, ಅದಕ್ಕೆ ನಾವೇ ಊರಿಗೆ ಹೋಗಬೇಕು. ನಮಗೆಲ್ಲಿ ಹೋಗಲಿಕ್ಕಾಗುತ್ತದೆ? ನಾವು ಬಹಳ ವರ್ಷದಿಂದ ಮದರಾಸಿನಲ್ಲಿಯೇ ತಂಗಿಬಿಟ್ಟವರು. ಅಪ್ಪನು ಪೋಟೇಲು ಮುಚ್ಚಿ ಹಾಗೆಲ್ಲ ಹೋಗುವವರೇ ಅಲ್ಲ. ಇನ್ನು ನಮಗಾಗಿ ಊರಿನಲ್ಲಿ ಮೆಹನತ್ತು ಮಾಡುವವರು ಯಾರಿ ದ್ದಾರೆ? ನಮ್ಮ ತಲೆಗೆ ನಮ್ಮ ಕೈಯೆ. ಇಲ್ಲಿಯೇ ಎಲ್ಲಿಯಾದರೂ ಒಳ್ಳೆ ಕುಳವಾರಿ ಸಿಕ್ಕಿದರೆ ಆಗುತ್ತಿತ್ತು; ಎಲ್ಲಿ ಸಿಕ್ಕುತ್ತೊ!" ಎಂದು ನನ್ನ ತಾಯಿ ಉದ್ದಕ್ಕೆ ಮಾತಾಡಿ, ಉದ್ದವಾದೊಂದು ಉಸಿರನ್ನೂ ಬಿಟ್ಟಳು.

ಆಗ ನಾನಂದೆ— "ನೀನು ಸುಮ್ಮನಿರಮ್ಮ. ನಾನು ನಿಮ್ಮನ್ನು ಬಿಟ್ಟು ಎಲ್ಲಿಗೂ ಹೋಗುವುದೇ ಇಲ್ಲಮ್ಮ"

"ಅದು ಹ್ಯಾಗಾದೀತೇ ಗಿರಿಜಾ? ಹೆಣ್ಣು ಜನ್ಮಕ್ಕೆ ಅತ್ತೆಮನೆ ತಪ್ಪು ವುದುಂಟೆ? ಏನೋ ನಿನ್ನಂತ ಮುದ್ದಾದ ಹುಡುಗಿಗೆ ಒಪ್ಪುವಂತ ಒಳ್ಳೇ ಶ್ರೀಮಂತರ ಮನೆ ಸಿಕ್ಕಿದರೆ ಆಗ್ತಿತ್ತು!"

"ನಿನ್ನ ಪುಣ್ಯ ಅಮ್ಮ, ಅದು ಮಾತ್ರ ಬೇಡ! ಶ್ರೀಮಂತರೆಂದರೆ ಭಾರೀಶ್ರೇಷ್ಠರೆಂದು ತಿಳಿದೆಯಾ ನೀನು? ಬಡವರೆಂದರೆ ಅವರಿಗೆ ಕಸ! ನಮಗೂ ಅವರಿಗೂ ಎಂದಿಗೂ ಸರಿ ಹೋಗಲಿಕ್ಕಿಲ್ಲ. ಒಂದು ವೇಳೆ ನನಗೆ ಮದುವೆಯೇ ಆಗುವುದಾದರೆ, ನಮ್ಮ ಹಾಗಿನವರೇ [illegible]

ಸಂಬಂಧಿಕರಾಗಬೇಕಮ್ಮ. ಶ್ರೀಮಂತರ ಮನೆ ಅಂದರೇನೇ ನನಗೆ ನಡುಕ ಬರುತ್ತದೆ. !"

ತಾಯಿನಗುತ್ತ— "ಎಷ್ಟು ಯೋಚನೆ ಓಡುತ್ತೆಯೇ ನಿಂಗೆ? ಎಂಥಾ ನಡುಕವೋ ಮಹಾ? ಎಟಕದ ದ್ರಾಕ್ಷೀನ ನರಿ ಹುಳೀ ಅಂದಹಾಗೆ! ತಾನಾಗಿ ಬಂದು ನಿನ್ನನ್ನು ಕೊಂಡೊಯ್ಯುವಂಥ ಪುಣ್ಯಾತ್ಮರ ಮನೆಗೆ ಹೋಪದೆ ಹಾಗೇನೂ ಇಲ್ಲ."

"ಸರಿ ಬಿಡಮ್ಮ. ಆಗದ ಹೋಗದಮಾತು!"

"ಹೌದಮ್ಮ ಅದೆಲ್ಲ ಆಗದ ಹೋಗದ ಮಾತಂತ ಗೊತ್ತಿದ್ದೇ ನಿನ್ನಪ್ಪನೂ, ನಾನೂ ನಿನ್ನೆ ಒಂದು ಆಗುವಂಥ ಮಾತನ್ನೆ ಮಾತಾಡಿಕೊಂಡೆವು. ನಿನಗಿನ್ನೂ ಗೊತ್ತಿಲ್ಲಷ್ಟೆ?"

"ನಂಗೇನು ಗೊತ್ತಮ್ಮ?"

"ನಮ್ಮ ವೆಂಕಟೇಶ ಇದ್ದಾನಷ್ಟೆ?"

"ವೆಂಕಟೇಶ....?" —ಈಗ ನನ್ನಕಿವಿ ತುಸು ಚುರುಕಾಯಿತು.

"ಹೌದು. ಅಲ್ಲಿ-ಇಲ್ಲಿ ಹುಡುಕಾಡಿ ನಾಯುವರಗಳಿಯೇಕೆ, ನಮ್ಮ ವೆಂಕಟೇಶನಿಗೇ ನಿನ್ನನ್ನು ಕೊಟ್ಟು ಬಿಟ್ಟರೇನೂಂತ ನಿನ್ನೆ ನಾವು ಮಾತಾಡಿಕೊಂಡೆವು. ಅವನಿಗೇನಾಗಿದೆ? ಯಾಕಾಗಬಾರದು? ರೂಪವೂ ಪ್ರಾಯವೂ ಸರಿಯಾಗಿದೆ. ಗುಣದಲ್ಲಿಯೂ ಒಳ್ಳೆಯವನಾಗಿದ್ದಾನೆ ನಮ್ಮ ಮನೆಯಲ್ಲಿಯೇ ಇದ್ದಾನೆ. ಹೀಗೆಯೇ ನಮ್ಮಲ್ಲೇ ಇರುವಹಾಗೂ ಅವನನ್ನು ಮಾಡಿಕೊಳ್ಳಬಹುದು. ಆಗ ನಿನಗೆ ಅತ್ತೆಯ ಮನೆಗೆ ಹೊಗುವ ಕಷ್ಟವೂ ಇಲ್ಲ ಇದು ಒಳ್ಳೆಯದಲ್ಲವೇನೆ? ನಿನಗೆಹೇಗೆಕಾಣುತ್ತಮ್ಮ?"

ಹೇಗೆ ಕಾಣುತ್ತದೆನ್ನಲಿ? ಒಂದೂ ತಿಳಿಯಲಿಲ್ಲ. ಎನೋ ಒಂದು ಆನಂದದ ಗಾಳಿ ನನ್ನ ಮೈಯೊಳಗೆಲ್ಲ ಹೊಕ್ಕಂತಾಯಿತು ಮದುವೆ ಎಂಬ ಪ್ರಶ್ನೆಗೆ ಸಂದೇಹಿಸಲ್ಪಟ್ಟ ಉತ್ತರಗಳೆಲ್ಲ ಹಾರಿಹಾರಿ ಹೋದುವು. ಒಂದು ಉತ್ತರವು ಮಾತ್ರ ಅಲ್ಲಿ ನಿಂತಿತು ಅದು ವೆಂಕಟೇಶ! ನನ್ನ ಮನೋಭೂಮಿಯಲ್ಲಿ ಖಾಲಿಯಾಗಿದ್ದ ಅದೊಂದು ಗುರುತಿನಸ್ಥಾನದಲ್ಲಿ ನನಗೆ ತಿಳಿಯದಲೇ ವೆಂಕಟೇಶನು ಹೊಕ್ಕು ನೆಲೆಸಿ ಕೊಂಡಂತೆ ತೋರಿತು ಆಹಾ! ನನಗೆ ತೀರ ಸುಪರಿಚಿತನಾದ ವರ! ........

ನನ್ನ ಮುಖಭಾವದಿಂದ ತಾಯಿ ಏನು ಅಳೆದು ಕೊಂಡಳೋ, —
"ಯಾಕೆ ಗಿರಿಜಾ ಮಾತಾಡುವುದಿಲ್ಲ ? ಆಗಬಹುದುತಾನೆ ? -ಆಗದೇ
ಏನು?" ಎಂದಳು ನನ್ನ ಮುಖವನ್ನು ಪರೀಕ್ಷಿಸುತ್ತಾ,

"ನನಗೆ ಗೊತ್ತಿಲ್ಲಮ್ಮ" ಎಂದು ನಾನು ಮುಖವನ್ನು ಕಡಿದಾಗಿ ಮಾಡಿ
ಕೊಂಡು ಅಲ್ಲಿಂದ ಸರಕ್ಕನೆ ಎದ್ದು ಹೊರಗೆ ಹೋಗಿಬಿಟ್ಟೆ. ಆಗ ತಾಯಿ
ಮುಗುಳು ನಗುತ್ತ—"ನನಗೆ ಗೊತ್ತು ಕಂದ ನಾನೂ ಸಣ್ಣವಳಿದ್ದಾಗ ಹೀಗೇ
ಮಾಡಿದ್ದೆ. ಎಂದು ಹೇಳುವದು ನನ್ನ ಕಿವಿಗೆ ಬಿತ್ತು.

"ಅತ್ತೆ ಇದ್ದಾರೆಯೇ ಗಿರಿಜಾ ?—" ನಾನು ಹೊರಗೆ ಬರುತ್ತಿದ್ದಾಗ
ನನ್ನಿದಿರೇ ಬರುತ್ತಿದ್ದ ವೆಂಕಟೇಶನು ನನ್ನನ್ನು ಕೇಳಿದನು. ಅಯ್ಯೋ !
ಅಕಸ್ಮಾತ್ತಾಗಿ ಎಂದೂ ಇಲ್ಲದ ನಾಚುಗೆಯ ಹೂಗಳು ಸಳಸಳನೆ ನನ್ನ
ಮೇಲೆ ಸುರಿದಹಾಗಾಯಿತು ! ಆ ಗಲಿಬಿಲಿಯಲ್ಲಿ ನಾನು ಏನು ಹೇಳಿದೆನೋ
ನನಗೇ ಗೊತ್ತಿಲ್ಲ. "ಇದ್ದಾರೆ" ಎಂದಿರಬೇಕು. ಎಂದೂ ಇಲ್ಲದ ನನ್ನ
ಆ ವಿಚಿತ್ರರೀತಿ ಅವನಿಗೂ ಗೊತ್ತಿರದಿದ್ದರೆ, ಅವನೇಕೆ ಹಾಗೆ ಆಶ್ಚರ್ಯದಿಂದ
ಒಂದು ನಿಮಿಷ ಗಕ್ಕನೆ ನಿಂತು ನೋಡುತ್ತಿದ್ದ ? ಆಗ ನಾನೂ ಮೂಢಳಂತೆ
ನಿಂತುಬಿಟ್ಟಿದ್ದೆ ತಲೆತಗ್ಗಿಸಿ. ಅನಂತರ ಅವನು ಒಳಗೆ ಹೋದ, ನಾನು
ಹೊರಗೆ ಹೋದೆ. ಎಲ್ಲಿಗೆ ಹೋಗುವುದೆಂದು ತಿಳಿಯದೆ ಹೊರಗಿನ ಬಾಗಿಲ
ಬಳಿಯಲ್ಲಿ ಸ್ವಲ್ಪ ನಿಂತೆ. ನನ್ನ ಅವಸ್ಥೆ ಅವನಿಗೂ ಗೊತ್ತಾಯಿತೇನೊ ?
ಇನ್ನು ಅವನ ಮುಂದೆ ನಿಂತು ಮಾತಾಡುವುದು ಹೇಗೆ ? ಈ ಮದುವೆಯ
ಪ್ರಸ್ತಾಪಕ್ಕೂ ನಾಚುಗೆಗೂ ಇಷ್ಟು ನಿಕಟಸಂಬಂಧವೇಕೊ ? ಇದೇನು ?
ಸಂತೋಷವೋ ದುಃಖವೊ ?

ನನ್ನ ತಂಗಿ ಸರೋಜ ಓಡಿ ಬಂದು ನನ್ನ ಕೈಯನ್ನು ಹಿಡಿದು "ಅಕ್ಕಾ,
ಬೀಚಿಗೆ ಹೋಗೋಣ ಬಾರೇ" ಎಂದಳು.

ಆಗ ತಾನೇ ನಾನು ಅರಿವಿಗೆ ಬಂದು-"ಅಮ್ಮನ ಹತ್ತಿರ ಹೇಳಿದ್ದಿಯಾ ?
ಏನಾದರೂ ಕೆಲಸವಿದ್ದೀತು; ಕರೆದಾಳು."

"ಹೇಳಿದ್ದೇನಕ್ಕ. ಅಮ್ಮನೇ ಅಂದಳು ಹೋಗಿಬನ್ನೀಂತ."

ಆಗ ಒಳಗೆ ವೆಂಕಟೇಶ ನನ್ನ ತಾಯಿಯೊಡನೆ—"ಏನತ್ತೆ ? ಗಿರಿಜ
ಒಂದು ನಮೂನೆ ಇದ್ದಾಳಲ್ಲ ?" ಎಂದುದು ನನ್ನ ಕಿವಿಗೆ ಬಿತ್ತು. ಅವನಿಗೆ
ಇನ್ನೂ ಈ ಮದುವೇ ವಿಷಯ ಗೊತ್ತಿರಲಿಕ್ಕಿಲ್ಲ. ತಂದೆ ತಾಯಿಯರ

ಮನದಲ್ಲಿ ಎದ್ದ ಈ ಮಾತನ್ನು ಈಗ ತಾನೇ ತಾಯಿ ನನ್ನ ಕಿವಿಗೆ ಹಾಕಿದ್ದ ಳಷ್ಟೇ ಎಂದು ತೋರುತ್ತದೆ. ಈಗೆಲ್ಲಿಯಾದರೂ ಅವನ ಕಿವಿಗೂ ಹಾಕು-ತ್ತಾಳೋ ಏನೊ ?

ನಾನು ಸರಸರನೆ ತಂಗಿಯ ಕೈ ಹಿಡಿದುಕೊಂಡು ಬೀಚಿನ ಕಡೆಗೆ ಹೊರಟೆ. ಮದರಾಸಿನಲ್ಲಿ ಬೀಚಿನ ಮಹತ್ವವು ಯಾರಿಗೆ ತಾನೇ ಗೊತ್ತಿಲ್ಲ? ಗೊತ್ತಿಲ್ಲದ ಬೇರೆ ಊರಿನವರು ಕೇಳಿಯಾದರೂ ಇದ್ದಾರು. ಬೀಚಿನ ಮರಳಿ ನಲ್ಲಿ ಜನರ ಗುಂಪಿಗೆ ಸ್ವಲ್ಪ ದೂರವಾಗಿಯೇ ನಾವು ಕುಳಿತೆವು. ಬೇಸಿಗೆಯ ಕಾಲ; ಸಾಯಂಕಾಲದ ಸಮಯ. ಈ ವೇಳೆಯಲ್ಲಿ ಮದರಾಸಿಗೆ ಬೀಚೆಂಬುದು ಒಂದು ಸ್ವರ್ಗದಂತೆ. ಆದರೆ ಆ ದಿನ ನನ್ನ ಮನಸ್ಸಿನಲ್ಲಿ ಹೊಸದೊಂದು ಸ್ವರ್ಗದ ಕಲ್ಪನೆಯಾಗುತ್ತಿದ್ದುದರಿಂದ ಅಲ್ಲಿನ ಸುಖಾನುಭವದಮೇಲೆ ನನ್ನ ಲಕ್ಷವೇ ಇರಲಿಲ್ಲ. ತಂಪಾಗಿ ಸೊಂಪಾಗಿ ರೊಂಯ್ಯರೊಂಯ್ಯನೆ ಬೀಸುವ ಕಡಲಿನ ಗಾಳಿಗಿಂತಲೂ ಸೊಗಸಾದ ಗಾಳಿ ನನ್ನ ಹೃದಯದೊಳಗೆ ಏಳುತ್ತಿ ದ್ದಿತು. ಹೊರಗಿನ ಕಿವಿಗೆ ಸವಿಯಾದ ಹಾಡಿನ ಗಾನವನ್ನುಡಿಸುತಿರುವ ಆ ರೇಡಿಯೋಗಿಂತಲೂ ಹೆಚ್ಚು ಸವಿಯಾದ ಸುಸ್ವರವೊಂದು ನನ್ನ ಮನದೊಳ ಗಿಂದ ಹೊರಡುತ್ತಿದ್ದಿತು. ಮುಳುಗಲಿರುವ ರವಿಯ ಕೆಂಗಿರಣಗಳ ರಂಗನ್ನು ಪೂಸಿಕೊಂಡು ಆಗಸದಂಗಳಲ್ಲಿ ಲೀಲೆಯಿಂದ ತಿರುಗಾಡುತಿರುವ ಹೂ ಮುಗಿಲುಗಳಂತೆ, ಮಾರಿಮಾರಿ ಕಾಣುವ ಆ 'ಗಂಧರ್ವನಗರಿ' ಯಂತೆ, ನನ್ನ ಮಾನಸಾಕಾಶದಲ್ಲಿ ಹೊಸಹೊಸ ಸೊಗಸಿನ ಕಲ್ಪನೆಗಳು ಮೂಡುತ್ತಿದ್ದುವು ಅಲ್ಲಿಯ ವಿಸ್ತಾರವಾದ ಮರಳಿನ ರಾಶಿಯಲ್ಲಿ, ತುಂಡುತುಂಡು ಗುಂಪು ಗಳಾಗಿ ಕುಳಿತುಕೊಂಡು ಸರಸವಾಗಿ ನಲ್ನುಡಿಯಾಟವಾಡುತಿರುವ ನೂರಾರು ನಲ್ಲ-ನಲ್ಲೆಯರ ಹಾಗೆಯೇ ನಾನೂ ಒಬ್ಬಳಾದಂತೆ ತೋರಿತು. ಅವನಾರು ನನ್ನ ಜತೆಯಲ್ಲಿರುವನಲ್ಲ ? ವೆಂಕಟೇಶ ! ಯಾಕೊ ! ಅವನ ನೆನಪು ಬರುತ್ತಲೇ ನಾಚುಗೆಯೂ ಧಾವಿಸಿಬಂದು ನನ್ನನ್ನು ಕವಿಯುತ್ತದೆ. ಇದು ವರೆಗೆ ಅದೆಲ್ಲಿ ಅಡಗಿತ್ತೊ ? ಈ ಮೊದಲೆಷ್ಟೋ ಬಾರಿ ಬೀಚಿಗೆ ಬಂದಿದ್ದೇನೆ; ಇಂದಿನಂತಹ ವಿಚಿತ್ರ ಅನುಭವವನ್ನು ಈ ಮೊದಲೆಂದೂ ಹೊಂದಿರಲಿಲ್ಲ. ಕವಿತಾವಾಸನೆಯುಳ್ಳ ನನ್ನ ತಂಗಿ ಸರೋಜ ಸುತ್ತುಮುತ್ತಿನ ಸೌಂದರ್ಯ ದೃಶ್ಯಗಳನ್ನು ಬಣ್ಣಿಸುತ್ತ ಏನೇನೋ ಮಾತಾಡುತ್ತಿದ್ದಳು. ನಾನು "ಹುಂ ಹುಂ" ಎಂದಷ್ಟೇ ಹೇಳುತ್ತಿದ್ದೆ. ನನ್ನ ಶಾಲೆಯ ಗೆಳತಿ ಪ್ರಮಿಳ, ನನ್ನನ್ನು

ಕಂಡು ಓಡಿಬಂದು—"ಏನೇ ಗಿರಿಜಾ ! ಈಗ ರೇಡಿಯೋದಲ್ಲಿ ಹಾಡಿಗವಳು ಯಾರು ಗೊತ್ತೆ ?" ಎಂದಳು. ನನಗೇನು ಗೊತ್ತು ? "ಏನೋ ನನಗೆ ಗೊತ್ತಾಗಿಲ್ಲಲ್ಲೇ" ಅಂದೆ. "ಛೀ ಹೋಗೇ ನೀನು ? ಎಲ್ಲೋ ಯೋಚನೆ! ಮುಖನೋಡಿದರೇ ತಿಳೀತ್ತೆ. ಏನೋ ಒಂದು ಥರಾ ಆಗಿದ್ದಿ! ನನ್ನ ಚಿಕ್ಕಮ್ಮನ ಮಗಳು ಮಾಧುರಿ ಹಾಡಿದ್ದು ತಿಳೀತ್ತೇ ?" ಎಂದಳು ಮಾಲತಿ.

"ನಾನು ಆಗಲೇ ಹೇಳಿದೆ— ಮಾಧುರೀ ಕಂಠದಹಾಗೆ ಕೇಳಿಸುತ್ತೇ ಅಂತ. ಇವತ್ತು ಅಕ್ಕ ಯಾವಾಗಿನ ಹಾಗಿಲ್ಲ. ಏನಕ್ಕಾ ? ತಲೆ ನೋಯುತ್ತ್ಯಾ ?" ಎಂದಳು ಸರೋಜ ನಸುಳಿಕೊಳ್ಳಲು ಎಡೆಸಿಕ್ಕಂತಾಗಿ... "ಹುಂ, ಸ್ವಲ್ಪ ತಲೆನೋವು" ಎಂದು ಹೇಳಿ ತಪ್ಪಿಸಿಕೊಂಡೆ. ಏನಿದು ? ನಾನೊಂದು 'ಥರಾ' ಆದುದು ಎಲ್ಲರಿಗೂ ಗೊತ್ತಾಗುತ್ತಿದೆಯೇ ? ನಾನು ಕಾಣಲಾರದ ಆ 'ಥರಾ' ವನ್ನು ತೊಡೆದುಹಾಕಲು ಬಹಳ ಪ್ರಯತ್ನಪಟ್ಟೆ. ಎಷ್ಟರಮಟ್ಟಿಗೆ ಸಾಧಿಸಿತೋ ! ಹೇಗೆ ಸಾಧಿಸೀತು ? ವೆಂಕಟೇಶ ನಮ್ಮ ಮನೆಯಲ್ಲಿಯೇ ಇರುವವನಾಯಿತಲ್ಲ ?

ಹೌದು, ವೆಂಕಟೇಶನು ನಮ್ಮೂರಕಡೆಯವನು; ಅಂದರೆ ಕಾಸರಗೋಡಿನವನು. ನನ್ನ ತಂದೆಯ ಹೋಟೆಲ್ಲಿನಲ್ಲಿ ಕೆಲಸಕ್ಕೆ ಸೇರಿಕೊಂಡಿದ್ದನು. ಸೇರಿ ಒಂದು ವರ್ಷವಾಗಿತ್ತು. ಹೊಟೆಲು ಇದ್ದುದು ನಮ್ಮ ಬಿಡಾರಕ್ಕೆ ಸಮೀಪದಲ್ಲಿಯೇ. ನನ್ನ ತಂದೆಗೆ ನಮ್ಮೂರಿನವರೆಂದರೆ ಆದರವು ಹೆಚ್ಚು. ವೆಂಕಟೇಶನು ಅನಾಥನಂತೆ ಕೆಲಸ ಹುಡುಕುತ್ತ ನಮ್ಮ ಹೊಟೆಲಿಗೆ ಬಂದಿದ್ದ. ಕೆಲಸದ ಅನುಭವಮಾತ್ರ ಏನೂ ಇರಲಿಲ್ಲ ಊರಿನಲ್ಲಿ ಒಬ್ಬಳು ತಾಯಿಯೂ ಒಬ್ಬ ತಮ್ಮನೂ ಇದ್ದಾರಂತೆ ತೀರ ಬಡತನದಿಂದಾಗಿ ಇವನು ಶಾಲೆಗೆ ಹೋಗುವುದನ್ನು ಬಿಟ್ಟು, ದ್ರವ್ಯಾರ್ಜನೆಗಾಗಿ ಕೆಲಸ ಹುಡುಕುತ್ತಾ ಬಂದ ನಂತೆ. ನಮ್ಮ ತಂದೆ ಅವನನ್ನು ೧೨ ರೂಪಾಯಿ ಸಂಬಳಕ್ಕೆ ಕೆಲಸಕ್ಕಿಟ್ಟು ಕೊಂಡರು. ಮೂರೆರಡುತಿಂಗಳ ಮೇಲೆ ಅವನು ಕೆಲಸದಲ್ಲಿ ತರಬೇತು ಹೊಂದುತ್ತಾ ಬಂದಂತೆ, ೧೫ ರೂಪಾಯಿ ಸಂಬಳಕ್ಕೇರಿಸಿದರು. ಇಷ್ಟರಲ್ಲಿ ಅವನು ತನ್ನ ಒಳ್ಳೆಯ ನುಡಿನಡತೆಗಳಿಂದ ನಮ್ಮೆಲ್ಲರ ವಿಶ್ವಾಸವನ್ನೂ ಗಳಿಸಿ ಕೊಂಡು ಬಿಟ್ಟಿದ್ದನು. ಅವನಿಗೆ ಊಟವೂ ನಮ್ಮ ಮನೆಯಲ್ಲಿಯೇ ಆಗ ಲಾರಂಭವಾಯಿತು. ಆಗಾಗ ಬಿಡುವಿದ್ದಾಗಲೆಲ್ಲ ನಮ್ಮ ಮನೆಗೇ ಬರು ತ್ತಿದ್ದ. ನಮ್ಮ ಪಾಠಪುಸ್ತಕಗಳನ್ನು ಓದುತ್ತಿದ್ದ; ತಮಾಷೆಯಾಗಿ ಮಾತಾ

ಡುತ್ತಿದ್ದ. ಇದರಲ್ಲಿಯು ಒಂದು ವಿಶೇಷವೇನಂದರೆ, ನನ್ನ ಮಾತೃಭಾಷೆ ಕನ್ನಡವಾದರೂ ನಾನು ಮದರಾಸಿನಲ್ಲಿಯೇ ಹುಟ್ಟಿ ಬೆಳೆದವಳಾದ ಕಾರಣ ನನ್ನ ವಿದ್ಯೆ ತಮಿಳಿನಲ್ಲಿಯೇ ಸಾಗಿತ್ತು; ಕನ್ನಡ ಕಲಿಯುಲು ತಕ್ಕ ವಸತಿ ಯುಳ್ಳ ಶಾಲೆ ಮದರಾಸಿನಲ್ಲಿಲ್ಲ. ಆದುದರಿಂದ ಬಿಡುವಿದ್ದಾಗಲೆಲ್ಲ ವೆಂಕಟೇಶ ನನ್ನಿಟ್ಟುಕೊಂಡು ನಾನೂ ಸರೋಜೆಯೂ ಕನ್ನಡವನ್ನು ಕಲಿಯುತ್ತಿದ್ದೆವು. ಹೀಗೆ ನಮಗೂ ಅವನಿಗೂ ಬಹಳ ಪರಿಚಯುವು ಬೆಳೆದುಹೋಯಿತು. ಅವನು ನನ್ನ ತಾಯಿಯನ್ನು 'ಅತ್ತೆ' ಯೆಂದೂ ತಂದೆಯನ್ನು 'ಮಾವ' ಎಂದೂ ಕರೆಯುತ್ತಿದ್ದನು ಮುಂದಿನ ಆಲೋಚನೆಯನ್ನು ಮಾಡಿಕೊಂಡೇ ಹಾಗೆ ಕರೆಯುಲಾರಂಭಿಸಿದ್ದೇನೂ ಅಲ್ಲ. ಈ ಪ್ರಾಂತದಲ್ಲಿ ಪರಿಚಿತರಲ್ಲದ ದೊಡ್ಡ ಹೆಂಗುಸರನ್ನು "ಮಾಮಿ" ಎಂದೂ ಅಂಥ ಗಂಡಸರನ್ನು "ಮಾಮಾ" ಎಂದೂ ಕರೆಯುವುದು ಕ್ರಮ–ಬಳಕೆ. ಅದೇಬಳಕೆಯುಲ್ಲ ಅವನೂ ಕರೆಯುಲಾರಂಭಿ ಸಿದ್ದು. ಅದೀಗ ಸಾರ್ಥಕವೇ ಆಗುವಂತೆ ನನಗೂ ವೆಂಕಟೇಶನೊಂದಿಗೇ ಮದುವೆಯಾಯಿತು. ಹೌದು; ಆಯಿತು. ಇದು ನನಗೂ ಇಷ್ಟವಿಷ್ಟೇ [illegible] ಮದುವೆಯೆಂದು ಇನ್ನು ಬಿಡಿಸಿಬೇರೆ ಹೇಳ ಬೇಡವಷ್ಟೆ ?

ಇನ್ನು ವೆಂಕಟೇಶನು ನನಗೆ ವೆಂಕಟೇಶನಲ್ಲ; ವೆಂಕಟೇಶರು! 'ಅವನು' ಅಲ್ಲ, 'ಅವರು!' "ಪತಿ"

೨

ಮದುವೆಯಾದುದು ತಿರುಪತಿಯಲ್ಲಿ ಕಾರಣ, ಮದರಾಸಿನಲ್ಲಿರುವ ನಮ್ಮ ಬಾಡಿಗೆಯ ಮನೆ ಅನುಕೂಲವಾಗಿರಲಿಲ್ಲ; ಮತ್ತು ಖರ್ಚು ಅಧಿಕ ವಾದೀತೆಂದುಕೊಂಡು ತಂದೆಯವರು ಮದುವೆಗೆ ತಿರುಪತಿ ಪುಣ್ಯಸ್ಥಳವನ್ನೆ ಗೊತ್ತುಮಾಡಿಕೊಂಡರು. ತಂದೆಯವರು ನನ್ನ ಮದುವೆಯನ್ನು ಕುರಿತು, ನಮ್ಮೂರಿನಲ್ಲಿರುವ ಕುಟುಂಬದವರಿಗೆಲ್ಲ ಕಾಗದ ಹಾಕಿದ್ದರು. ಆದರ ಅವರಾರೂ ಖರ್ಚುಮಾಡಿಕೊಂಡು ತಿರುಪತಿಗೆ ಬರಲಿಲ್ಲ. ನನ್ನ ಪತಿಯ ತಮ್ಮನು ಮಾತ್ರ ಮದುವೆಗೆ ಬಂದಿದ್ದನು. ಆಗ ನನ್ನ ಪತಿಯ ವಿಷಯವಾ ದೊಂದು ಖೇದಜನಕವಾದ ಸಮಾಚಾರವು ನಮಗೆ ಗೊತ್ತಾಯಿತು; ಒಂದು ವರ್ಷದ ಹಿಂದೆ ವೆಂಕಟೇಶರು ಊರಿನಲ್ಲಿ ತಾಯಿಯೊಡನೆ ಜಗಳವಾಡಿ ಮನೆಯಲ್ಲಿದ್ದ ಸ್ವಲ್ಪ ದುಡ್ಡನ್ನು ಅಪಹರಿಸಿಕೊಂಡು ಹೇಳದೆ ಹೊರಟು ಬಿಟ್ಟಿದ್ದರಂತೆ. ಆ ಮೇಲೆ ಇವರು ಎಲ್ಲಿಗೆ ಹೋದರು ? ಏನಾದರು ?

ಎಂಬ ಸುದ್ದಿಯೇ ತಿಳಿಯದೆ, ಅದೇ ಚಿಂತೆಯಲ್ಲಿ ಅವರ ತಾಯಿ ಹಾಸಿಗೆ ಹಿಡಿದು ಈಗೆರಡು ತಿಂಗಳಹಿಂದೆ ಕಾಲವಶರಾದರಂತೆ. ಅನಂತರವಷ್ಟೇ ಈ ಆಸಾಮಿ ತಾನು ಮದರಾಸಿನಲ್ಲಿ ಮದುವೆ ಮಾಡಿಕೊಳ್ಳಲಿರುವೆನೆಂದೂ, ಅಗತ್ಯವಾಗಿ ಬರಬೇಕೆಂದೂ ಬರೆದ ಕಾಗದವು ಇವರ ತಮ್ಮನಿಗೆ ಸಿಕ್ಕಿ, ಸಂಗತಿ ಗೊತ್ತಾಗಿ ಹೊರಟು ಬಂದನಂತೆ. ಶುಭಕಲ್ಯಾಣದ ಸಮಯದಲ್ಲಿ ಇದೊಂದು ಕೆಟ್ಟ ಗುಟ್ಟಿನ ಬಯಲಿನಿಂದ ನನ್ನ ತಂದೆಯ ಮುಖವು ಖಿನ್ನವಾಯಿತು; ನನಗೂ ಆಶ್ಚರ್ಯವಾಯಿತು. ವೆಂಕಟೇಶರು ತಮ್ಮನ ಮಾತಿಗೆ ಆಕ್ಷೇಪಣೆ ಮಾಡುತ್ತ—"ಊರಿನಿಂದ ನಾನು ಹೇಳದೆಬಂದೆನೆನ್ನುವುದು ತೀರ ಸುಳ್ಳು. ನಾನುಹಾಕಿದ ಕಾಗದಕ್ಕೆ ನೀವೇಉತ್ತರ ಹಾಕಲಿಲ್ಲ." ಎಂದು ವಾದಮಾಡಿದರು. ಇದೊಂದು ಸಣ್ಣ ಜಗಳವೇ ಆಗುವ ಲಕ್ಷಣಕ್ಕೆ ಮುಟ್ಟಲು, ನನ್ನ ತಂದೆಯೂ, ಪುರೋಹಿತರೂ ನಡುವೆ ಹಾದುಹೋಗಿ ಆ ಅಣ್ಣತಮ್ಮಂದಿರನ್ನು ಸಮಾಧಾನಪಡಿಸಿದರು. ಸಂತೋಷದ ಈ ಆರಂಭದಲ್ಲಿ ಇದೊಂದು ಸಣ್ಣದೋ, ದೊಡ್ಡದೋ ಗಲಾಟೆ ಎದ್ದುದು ನನ್ನ ಮನಸ್ಸಿನೊಳಗೆ ಏನೋ ಒಂದು ನೋವನ್ನುಂಟುಮಾಡಿತು. "ನನ್ನ ಪತಿ ಹೆತ್ತತಾಯಿಯನ್ನು ಕೂಡ ಅಲಕ್ಷಿಸಿ ಹೇಳದೆ ಓಡಿಬರುವಷ್ಟು ಕೆಡುಕರೆ? ಆಗಾಗ ತಾಯಿಯ ಕಾಗದ ಬರುತ್ತದೆಂದೂ, ಸಂಬಳವನ್ನು ಊರಿಗೆ ಕಳುಹಿಸುತ್ತಿರುವೆನೆಂದೂ, ಕ್ಷೇಮಸಮಾಚಾರಗಳನ್ನು ಊರಿಗೆ ಬರೆಯುತ್ತಿರುವೆನೆಂದೂ ಅವರು ಆಗಾಗ ಹೇಳುತ್ತಿದ್ದುದನ್ನು ನಾನು ಕೇಳಿದ್ದೆ. ಅವೆಲ್ಲವೂ ಸುಳ್ಳುಮಾತುಗಳೇನು ? " ಎಂಬಸಂದೇಹದ ಪ್ರಶ್ನೆಗಳು ಎದ್ದೆದ್ದು ಪೀಡಿಸಿದುವು ನನ್ನನ್ನು. ಒಂದು ವಿಷಯದಲ್ಲಿ ತಾವು ಸುಳ್ಳುಗಾರರೆಂಬುದನ್ನು ಅವರೇ ಒಪ್ಪಿಕೊಂಡೂ ಬಿಟ್ಟರು. ಮದುವೆಯ ಕಾರ್ಯಗಳೆಲ್ಲ ಮುಗಿದ ಮೇಲೆ ನಾವು ಮದರಾಸಿಗೆ ಹಿಂದಿರುಗುವಾಗ ರೈಲಿನಲ್ಲಿ ಪುನಃ ಈ ವಾದವೆದ್ದಿತ್ತು. ನನ್ನತಂದೆ—ಹಾಗಾದರೆ ವೆಂಕಟೇಶ, ನೀನು ಊರಿಂದ ಕಾಗದ ಬರುತ್ತಿದೆಯೆಂದೂ, ನೀನೂ ಹಾಕುತ್ತಿರುವಿಯೆಂದೂ ಸುಳ್ಳು ಹೇಳುತ್ತಿದ್ದಿಯೇಕೆ? ಊರಿಗೆ ಕಳುಹಿಸಬೇಕು ಅಂತ ಸಂಬಳ ಕೂಡಾಕೇಳಿ ತೆಗೆದುಕೊಳ್ಳುತ್ತಿದ್ದಿಯಲ್ಲ? ಅದೆಲ್ಲ ಏನುಮಾಡಿದಿ? ಎಂದು ಕೇಳಿದರು. ಅದಕ್ಕವರು—ಸಂಬಳವೆಲ್ಲ ನನ್ನ ಕೈಯಲ್ಲೇ ಇದೆ. ಈಗ ಮದುವೆಯ ಬಟ್ಟೆಬರೆಗಳಿಗಾಗಿ ಸ್ವಲ್ಪ ಖರ್ಚಾಗಿದೆ. ನಾನು ಊರಿನಿಂದಬಂದಕೂಡಲೇ ಒಂದು ಕಾಗದ ಹಾಕಿದ್ದಕ್ಕೆ ಊರಿನಿಂದ ಉತ್ತರವೇ

ಬಾರದ್ದರಿಂದ ಮತ್ತೆ ಸುಮ್ಮನೆಯೇ ಇದ್ದೆ. ಈ ಬೇಸರದ ಸಂಗತಿಯನ್ನು ನಿಮಗೆಲ್ಲ ಯಾಕೆ ಹೇಳುವುದೆಂದುಕೊಂಡು ಊರಿನಿಂದ ಕಾಗದ ಬರುತ್ತಿರುವುದೆಂದೂ ನಾನೂ ಹಾಕುತ್ತಿರುವೆನೆಂದೂ ಸುಮ್ಮನೆ ಹೇಳುತ್ತಾ ಬಂದೆ. ನೀವು ಅಷ್ಟು ಪರೀಕ್ಷೆ ಮಾಡಿ ಎಲ್ಲಿ ಕೇಳಿದ್ದಿರಿ ? ಎಂದು ಗುಟ್ಟೊಡೆದು ಹೇಳಿದರು.

ಮದುವೆಯಾಗಿ ಮದರಾಸಿಗೆ ಬಂದಮೇಲೆ, ಅವರ ತಮ್ಮನನ್ನು ಒತ್ತಾಯಮಾಡಿ ನಾಲ್ಕುದಿನ ಇರಿಸಿಕೊಂಡಿದ್ದೆವು. ಆಗ ಕೂಡ ಆ ಅಣ್ಣ-ತಮ್ಮಂದಿರೊಳಗೆ ಅಷ್ಟು ಒಳ್ಳೆಯದಿರುವಂತೆ ನನಗೆ ತೋರಲಿಲ್ಲ. ಊರಿಗೆ ಯಾವಾಗ ಬರುತ್ತೀಯಣ್ಣ ? ಎಂದು ತಮ್ಮನು ಕೇಳಿದ್ದಕ್ಕೆ ನಾನು ಬರುವದಿಲ್ಲ ಹೋಗೋ ಯಾಕೆ ಬರಲಿ ? ಏನಿದೆ ಅಲ್ಲಿ ? ಇದ್ದ ಒಂದು ಚೂರು ಜಾಗೆ ನೀನೇ ನೋಡಿಕೋ" ಎಂದು ಅವರು ಕಡಿದು ಉತ್ತರ ಹೇಳಬಾರದಿತ್ತೆಂದು ನನಗನಿಸಿತು. ಯಾಕೆ ? ಒಮ್ಮೆ ಊರಿಗೆ ಹೋಗಿ, ಮನೆ ತೋಟಗಳನ್ನು ನೋಡಿಕೊಂಡು ತಮ್ಮನನ್ನು ಸಮಾಧಾನಪಡಿಸಿ ಬಂದರಾಗದಿತ್ತೆ ? ನನ್ನ ತಾಯಿ ಈ ಅಭಿಪ್ರಾಯವನ್ನು ವ್ಯಕ್ತಪಡಿಸಿದುದಕ್ಕೆ "ಏನೂ ಕೆಲಸವಿಲ್ಲದೆ ಸುಮ್ಮನೆ ಊರಿಗೆ ಹೋಗುವುದರಲ್ಲೇನು ಅರ್ಥ ? ಸುಮ್ಮನೆ ಖರ್ಚು" ಎಂದರು ನನ್ನ ಆ ಪತಿ. ಅದಕ್ಕೆ ನನ್ನ ತಂದೆ —"ಹೌದೌದು. ಊರೇನು ಯಾವಾಗಲೂ ಇದ್ದದ್ದೇ. ಪ್ರಕೃತ ಇಲ್ಲೇ ಇದ್ದು ಕೈಯಲ್ಲಿ ಸ್ವಲ್ಪ ದುಡ್ಡಾದನಂತರ ಊರಿಗೆ ಹೋಗುವುದೇ ಒಳ್ಳೇದು" ಎಂದು ಸೈಗುಟ್ಟಿಬಿಟ್ಟರು. ಕಡೆಗೆ ತಮ್ಮನೆ ಒಬ್ಬನೇ ಊರಿಗೆ ಹೊರಟುಹೋದನು.

ನನಗೆ ಅತ್ತೆಮನೆಯ ಪ್ರಶ್ನೆಯೇ ತಪ್ಪಿಬಿಟ್ಟುದರಿಂದ, ಮದುವೆಯಾಗುತ್ತಲೇ ಸ್ತ್ರೀವಿದ್ಯೆಯ ಪ್ರಶ್ನೆ ನನ್ನನ್ನೇನೂ ಕಾಡಿಸಲಿಲ್ಲ. ತಂದೆ ನನ್ನನ್ನೊಂದು ಸ್ವತಂತ್ರ ದಾರಿಗೆ ಹಚ್ಚಬೇಕೆಂಬ ಪ್ರಯತ್ನದಲ್ಲಿಯೇ ಇದ್ದರು. ಅವರ ಇಚ್ಛೆಯೂ ನನ್ನ ಉತ್ಸಾಹವೂ ಒಂದೇ ಆಯಿತು. 'ಥರ್ಡ್ ಫಾರಂ' ಪಾಸಾಗುತ್ತಲೇ ನಾನು ಟ್ರೇನಿಂಗಿಗೆ ಸೇರಿ ಕಲಿಯಲಾರಂಭಿಸಿದೆ. ಆದರೆ ಇದು ನನ್ನ ಪತಿಗೆ ಸರಿಬರಲಿಲ್ಲವೆಂದು ತೋರಿತು. ಒಂದು ದಿನ ಅವರು ನನ್ನ ತಂದೆಯನ್ನು ಕುರಿತು "ಗಿರಿಜೆ ಇನ್ನೇಕೆ ಮಾವಾ ಸುಮ್ಮನೆ ಕಲಿಯುವುದು ? ಹೆಂಗುಸರಿಗೆ ಸ್ವಲ್ಪಮಟ್ಟಿಗೆ ಓದಲಿಕ್ಕೂ, ಬರೆಯಲಿಕ್ಕೂ ಬಂದರೆ ಸಾಕಲ್ಲ ?" ಎಂದು ಆಕ್ಷೇಪಣೆಯ ಮುನ್ನಡಿಯನ್ನು ಹಾಕಿದರು.

"ಇವಳು ಕಲಿತರೆ ನಿನಗೇನು ಕಷ್ಟ ? ಇವಳೊಂದು ಸಣ್ಣ ಮಾಸ್ತರಿಣಿ

ಯಾದಳೆಂದರೆ ನಿನಗೂ ಒಳ್ಳೆಯ ಆಧಾರವಲ್ಲವೇನೊ ?'' ಎಂದರು ನನ್ನ ತಂದೆ. ನನ್ನವರು "ಓಹೊ'' ಎಂದು ಸುಮ್ಮನಾಗಿಬಿಟ್ಟರು. ಈ 'ಓಹೊ' ಅವರ ಮನಸ್ಸಿನ ಅತೃಪ್ತಿಯ ಅರ್ಥದಿಂದ ಪುಷ್ಟಿಗೊಂಡಿರುವಂತೆ ನನಗೆ ತೋರಿತು. ಅವರ ಹೃದ್ಗತವನ್ನು ಚೆನ್ನಾಗಿ ಅರಿತುಕೊಳ್ಳಬೇಕೆಂದು ನಾನು ಭಾವಿಸಿದೆನು. ಆದರೆ ಅದಕ್ಕೆ ತಕ್ಕ ಸಂಧಿದೊರೆಯಲು ಬಹಳ ದಿನಗಳಾದುವು.

ಕಾರಣ ನಾವು ವಾಸವಾಗಿರುವ ಮನೇಯೇ ಅಂತಹದು. ಮದರಾಸಿನಲ್ಲಿ ಮನೆಗಳಿಗಿರುವ ಕಷ್ಟವು ಯಾರಿಗೆ ತಾನೇ ಗೊತ್ತಿಲ್ಲ ? ನಾವಿದ್ದ ಮನೆ ಚಿಕ್ಕಮನೆ. ಮುಂದಿನ ಅರ್ಧಭಾಗದಲ್ಲಿ ನಾವಿದ್ದೆವು ಹಿಂದಿನ ಅರ್ದ ಭಾಗದಲ್ಲಿ ಮನೆಯೊಡೆಯರಾದ ಅಯ್ಯರ್ರ ಕುಟುಂಬವು ವಾಸವಾಗಿತ್ತು. ಉಪ್ಪರಿಗೆಯ ಮೇಲೊಂದು ಮುದಲಿಯಾರ್ರ ಕುಟುಂಬವು ಬಾಡಿಗೆಗಿತ್ತು. ನಮ್ಮ ಉಪಯೋಗಕ್ಕಿರುವುದೆಂದರೆ ಒಂದು ಅಡುಗೆಮನೆ, ಅದರೀಚೆಗೊಂದು ಬಿಡುಗೋಣೆ, ಹೊರಬಾಗದ ಜಗುಲಿ ಇಷ್ಟೇಸರಿ ಇಷ್ಟೊಂದಕ್ಕೆ ೧೫ ರೂಪಾಯಿ ಬಾಡಿಗೆ. ಇಂತಿರುವ ಇಕ್ಕಟ್ಟಾದ ಮನೆಯಲ್ಲಿ ಒಬ್ಬರಿಗೊಬ್ಬರು ಒತ್ತೊತ್ತಾಗಿಯೇ ಇರುವಾಗ, ಹೊಸತಾಗಿ ಮದುವೆಯಾದ ಗಂಡ–ಹೆಂಡಿರು ಮನಬಿಚ್ಚಿ ಸರಸಾಟವಾಡುವುದು ಹೇಗೆ ? ಗುಟ್ಟಿನ ಮಾತುಗಳಾಡುವುದೆಂತು ? ಕಾಣುವವರು ಕೇಳುವವರು ಊಹಿಸುವವರು ಏನೆಂದುಕೊಂಡಾರೋ ಎಂಬ ಅಂಕು ಬಾರದೆ ಹೋದೀತೆ ? ಈ ಕೊರತೆ ನನ್ನ ಮನಸ್ಸಿಗಂತೂ ತಾಗಿಕೊಂಡೇ ಇತ್ತು. ರಾತ್ರಿ ಬಿಡುಗೋಣೆ ಎನಿಸಿದ ಆ ನಡುಗೋಣೆಯಲ್ಲಿಯೇ ನಾವು ಗಂಡ–ಹೆಂಡಿರು ಮಲಗುವುದು. ಆಗ ಗಂಡನೊಡನೆ ಸ್ವತಂತ್ರವಾದ ಪ್ರಸ್ತಾಪ ಹಾಕಲು ನನಗಂತೂ ನಾಚುಗೆಯಾಗುತ್ತಿತ್ತು. ಅಡುಗೆಮನೆಯಲ್ಲಿ ಮಲಗಿರುವ ತಾಯಿಯೂ, ಜಗುಲಿಯಲ್ಲಿ ಮಲಗಿರುವ ತಂಗಿಯೂ ತಂದೆಯೂ ಕೇಳಿದರೆ ಏನೆಂದುಕೊಳ್ಳುವರೋ ಎಂಬ ಸಂಕೋಚದಿಂದ ಆ ಹೊಸ ಅನುಭವದ ರಾತ್ರಿಗಳಲ್ಲಿ ಗಂಡನೊಡನೆ ನಾನೇನೂ ಮಾತಾಡಲಾರದವಳಾಗಿದ್ದೆನು. ಪತಿಯೂ ವಿಶೇಷ ಮಾತಾಡಿಸುತಿರಲಿಲ್ಲ. ನನಗಿರುವ ಕೊರತೆ ಅವರ ಮನಸ್ಸಿಗೂ ಇದ್ದಿರಬಹುದಲ್ಲವೆ ?

'ಇನ್ನು ಹಗಲು ಹೊತ್ತಿನಲ್ಲಾದರೋ ನಾನಂತೂ ಶಾಲೆಗೆ ಹೋಗುವವಳು. ಮನೆಯಲ್ಲಿ ಉಳಿಯುವ ಸಂಜೆ–ಮುಂಜಾವುಗಳಲ್ಲಿ ಅವರೇನೂ ನನ್ನ ಜತೆಗೂಡುವವರಲ್ಲ. ನನ್ನ ತಂದೆ ಅವರ ಮೇಲೆ ಹೋಟೆಲಿನ ಕಾರ್ಯದರ್ಶನದ ಭಾರವನ್ನೆ ಹಾಕಿಬಿಟ್ಟಿದ್ದರು. ಅವರು ಹೋಟೆಲನ್ನು ಬಿಟ್ಟು

ಎಲ್ಲಿಗಾದರೂ ಹೋದರೆ ತಂದೆ ಅವರೊಡನೆ ಹತ್ತೆಂಟು ಪ್ರಶ್ನೆ ಕೇಳಿಬಿಡು ತ್ತಾರೆ. ಅನಾಥ ಹುಡಗನಾಗಿ ಬಂದವರಲ್ಲವೆ? ನನ್ನ ತಂದೆ ಅವರ ಮೇಲೆ ಚೆನ್ನಾಗಿ ಅಧಿಕಾರಚಲಾವಣೆ ಮಾಡುತ್ತಿದ್ದರು. ಮೊದಮೊದಲು ಅವರೂ ನನ್ನ ತಂದೆಗೆ ಹೆದರಿಕೊಂಡು ವಿಧೇಯರಾಗಿಯೇ ಇದ್ದರು. ಮದುವೆಯಾದ ಮೇಲೆ ಕ್ರಮೇಣವಾಗಿ ತಂದೆಗೆ ಇದಿರುತ್ತರ ಕೊಡಲಾರಂಭಮಾಡಿದರು. ಮೊದಲೇ ಇದಿರು ಸಿಟ್ಟಿನವರು ನನ್ನ ತಂದೆ. ಮಾವನಿಗೂ ಅಳಿಯನಿಗೂ ಮನೆಯಲ್ಲಿ ಊಟದ ವೇಳೆಯಲ್ಲಿ ಆಗುತ್ತಿರುವ ವಾದ-ವಿವಾದಗಳೆಲ್ಲ ನನಗೆ ಪ್ರತ್ಯಕ್ಷವಾಗಿ ಗೊತ್ತಾಗುತ್ತಿದ್ದುವು. ಹೋಟೆಲಿನಲ್ಲಿ ಕೂಡಾ ಅವರಿಬ್ಬರಿಗೆ ಏನೋ ತಕರಾರುಗಳು ಬರುತ್ತಿದ್ದುವಂತೆ. ತಂದೆ ಆಗಾಗ ಏನೋ ಕೆಲಸದ ಮೇಲೆ ಬೇರೆಲ್ಲಿಗಾದರೂ ಹೋದಾಗ, ನನ್ನ ಪತಿ ತಮ್ಮ ಜವಾಬುದಾರಿಕೆ ಯನ್ನು ಇನ್ನೊಬ್ಬ ಕೆಲಸದವನಿಗೆ ಒಪ್ಪಿಸಿ, ಕೆಲವುಬಾರಿ ಗಲ್ಲದ ದುಡ್ಡನ್ನೆತ್ತಿ ಕೊಂಡು ಎಲ್ಲಿಗೋ ಹೋಗಿಬಿಡುತ್ತಿದ್ದರಂತೆ. ಹೀಗೆ ದುಡ್ಡಿನ ಲೆಕ್ಕದಲ್ಲಿಯೂ ಅವರ ಕೈಚಳಕವು ಬೀಳಹತ್ತಿರುವದೆಂದು ನನ್ನ ತಂದೆ ಕೆಲವುಬಾರಿ ಮನೆ ಯಲ್ಲಿ ಗುಣುಗುಟ್ಟಿದುದರಿಂದಲೇ ನನಗಿಂದು ಗೊತ್ತಾಯಿತು. "ಏನೋ ತಬ್ಬಲಿ ಹುಡುಗ. ಕೆಲಸಗಳನ್ನೆಲ್ಲ ಶ್ರದ್ಧೆಯಿಂದ ಕಲಿತಾನು. ವಿದ್ಯೆಗಿದ್ಯೆ ಏನಿಲ್ಲದಿದ್ದರೂ, ಹೋಟೇಲು ಪ್ರವೃತ್ತಿಯಲ್ಲಿ ಚೆನ್ನಾಗಿ ಪಳಗಿಸಿ ಬಿಟ್ಟರೆ ಮುಂದೆ ಸ್ವತಂತ್ರವಾಗಿ ಮರ್ಯಾದೆಯಿಂದ ಬಾಳಿಯಾನು--- ಅಂತಲ್ಲವೇ ನಾನಿವನಿಗೆ ಮಗಳನ್ನು ಕೊಟ್ಟದ್ದು? ಇತ್ತೀಚೆಗೆ ಇವನಿಗೆ ಯಾರುಯಾರೋ ಸ್ನೇಹಿತರಾಗಿಬಿಟ್ಟಿದ್ದಾರೆ. ಆಗಾಗ್ಗೆ ಹೇಳದೇ ಕೇಳದೆ ಸಿನೇಮಾಕ್ಕೆ ಹೋಗು ತ್ತಾನಂತೆ. ಒಟ್ಟಾರೆ ಬಂದ ಹೊಸತಿನಲ್ಲಿ ಏನೊಂದೂ ತಿಳಿಯದ ಹಳ್ಳಿಯ ಬೆಪ್ಪನಾಗಿದ್ದವನು, ಇತ್ತೀಚೆಗೆ ಕಿಲಾಡಿಯಾಗಲು ಪಳಗಲಾರಂಭಿಸಿದ್ದಾನೆ. ಪಟ್ಟಣದ ಗಾಳಿಯ ಮಹಿಮೆ........" ಹೀಗೊಮ್ಮೆ ತಂದೆ ಮನನೊಂದು ಹೇಳಿದ ಮಾತು ಕೇಳಿ ನನಗೆ ಹೇಗೆಹೇಗೋ ಆಯಿತು! ಅಹ! ಮದುವೆಗೆ ಮುಂಚೆ ಮನೆಯೊಳಗಿನ ಪರಿಚಿತನೇ ಗಂಡನಾಗುವನೆಂದು ನಾನೆಷ್ಟು ಉಬ್ಬಿದ್ದೆ! ಎಂತೆಂತಹ ಆನಂದದ ಮಂದಿರಗಳನ್ನು ಕಲ್ಪಿಸಿದೆ! ಹಾ! ಈಗ ನಡೆಯತೊಡಗಿದ ವಿಧಾನದ ಪರಿಣಾಮವು ಏನಾಗುವುದೋ!

ಒಂದಾನೊಂದುದಿನ ರಾತ್ರಿ ನನ್ನ ಪತಿ ನನ್ನ ಕಿವಿಯಲ್ಲಿ— "ಗಿರಿಜ! ನಾಳೆ ಶನಿವಾರ ತಾನೆ? ಸಿನೆಮಕ್ಕೆ ಹೋಗೋಣವೇ ನಾವು? ಬರುತ್ತೀಯಾ?"

ಎಂದು ಪಿಸು ನುಡಿದರು.

ಈ ಪ್ರಶ್ನೆ ಸುಪ್ತವಾಗಿದ್ದ ನನ್ನ ಯಾವದೋ ಒಂದು ಬಯಕೆಯನ್ನು ಕೆರಳಿಸಿದಂತಾಯಿತು. ಹೌದು, ಅವರೊಂದಿಗೆ ಸಿನೆಮಕ್ಕೆ ಹೋಗಬಹುದು. ಅದರಲ್ಲೊಂದು ಸುಖವುಂಟು. ಆದರೆ ನನ್ನ ತಂದೆಗೆ ಸಿನೆಮಕ್ಕೆ ಹೋಗುವು ದೆಂದರೆ ಆಗದು. ಬುದ್ಧಿ ಕೆಟ್ಟು ಹೋಗುವದೆಂಬುದಕ್ಕಾಗಿ ಅವರು ಹಾಗನ್ನು ವುದಲ್ಲ. ಹೆಚ್ಚು ನೋಡಿದರೆ ಅದೊಂದು ಚಟವಾಗಿ ಹತ್ತಿಕೊಂಡೀತೆನ್ನು ವರು. ಅದರಿಂದ ದುಡ್ಡು ಹಾಳಾಗುವದಲ್ಲದೆ ಮತ್ತೇನೂ ಪ್ರಯೋಜನ ವಿಲ್ಲವೆಂಬುದು ಅವರ ಮತ. ಆದುದರಿಂದ ನಾನು ಮದರಾಸಿನಂತಹ ಮಹಾ ನಗರದಲ್ಲಿದ್ದರೂ, ಸಿನೆಮಕ್ಕೆ ಹೋದುದು ತೀರ ಕಡಿಮೆ. ಎಲ್ಲಿಯೋ ವರ್ಷಾರು ತಿಂಗಳಿಗೊಮ್ಮೆ ಗೆಳತಿಯರ ಕೂಡ ಹೋಗಿಬಂದುದುಂಟು. ಪತಿಯ ಪ್ರಶ್ನೆಗೆ ನಾನೂ ಪಿಸುಮಾತಿನಲ್ಲಿಯೇ ಹೇಳಿದೆ:— "ಅಪ್ಪ ಏನೆನ್ನು ವರೋ? ನೋಡುವ."

"ಇನ್ನೂ ನೀನು ಅಪ್ಪನಿಗೆ ಹೆದರುವಿಯಾ? ಸಣ್ಣ ಹುಡಿಗಿಯೇ ನೀನು? ನಿನ್ನಷ್ಟಕ್ಕೆ ನೀನು ಅಮ್ಮನ ಹತ್ತರ ಹೇಳಿಕೊಂಡು ಹೊರಟು ಬಿಡು"— ಎಂದು ಅವರಂದರು.

ಆಗ ಇನ್ನೊಂದು ತಂಟೆಯ ಯೋಚನೆ ಅಡ್ಡಬಂತು. "ಹೌದೆ? ನೀನು ಹೊರಟರೆ ನಿನ್ನೊಂದಿಗೆ ಸರೋಜೆಯೂ ಬಂದಾಳು!" ಎಂದರು ಪುನಃ ಅವರು.

"ಹೌದು ಮತ್ತೆ!"

"ಅದೇ ತಂಟೆ ನೋಡು. ನೀನೂ ನಾನೂ ಇಬ್ಬರೇ ಹೋಗಿ 'ಬಾಕ್ಸ್' ಅಂತ ಒಂದು ಉಂಟಂತೆ ಅದರಲ್ಲಿ ಕೂತು ನೋಡಬೇಕು."

"ಬಾಕ್ಸೆ? ಅದಕ್ಕೆಷ್ಟು ಟಿಕೆಟ್ಟಿಗೆ?"

"ಅದೆಲ್ಲ ನಿನಗೇಕೆ?"

"ಅದೆಲ್ಲ ಬೇಡ ಬಿಡೀ! ಯುರೋಪೀನ್ರ ಹಾಗೆ, ಹೇಸಿಗೆ!"

"ಹೇಸಿಗೇನೇ ಬಂತು? ಮತ್ತೆ ಯಾವಾಗ ನಾವು ಅಂಥಾ ಸುಖ ವನ್ನು ಅನುಭವಿಸುವುದು? ಅಲ್ಲದೆ ನಿನ್ನೊಡನೆ ಕೆಲವು ವಿಷಯ ಗುಟ್ಟಾಗಿ ಮಾತಾಡಲಿಕ್ಕೂ ಇದೆ. ನಾಳೆ ಸಂಜೆ ಐದುಗಂಟೆಗೆ ನೀನೊಬ್ಬಳೇ ಹೊರಡುವ ಉಪಾಯ ಮಾಡು."

ಉಪಾಯ ಮಾಡಬಹುದು. ಆದರೆ ಬರುವಾಗ ನಾವಿಬ್ಬರೂ ಒಟ್ಟಿಗೇ ಬಂದರೆ ಸತ್ಯಸಂಗ್ತಿ ಗೊತ್ತಾಗುತ್ತದೋ ಇಲ್ಲವೋ ? ”

ಗೊತ್ತಾದರೇನಾಯಿತಂತೆ ? ತಲೆ ತಗೀತಾರೇ ನಿನ್ನಪ್ಪ ? ಗಂಡ ನೊಂದಿಗೆ ಸಿನೆಮಕ್ಕೆ ಹೋದೆನೆಂದರೆ ತಪ್ಪೆಂದಾರೆ ? ಹಾಗೆ,ನಾದರೂ ಹೇಳಿದರೆ ಹೇಳಿಕೊಂಡಿರಲೀಂತ ಧೈರ್ಯ ಮಾಡಿಕೋ ! ಮತ್ತೆ ಎಷ್ಟು ದಿವಸ ನಾವು ಈ ಗೂಡಿನಲ್ಲಿರುವುದು ? ”

ತೀರ ಪಿಸುವಾಗಿಯೇ ನಡೆದುವು ಈ ಸಂಭಾಷಣೆ. ನನ್ನ ತಾರುಣ್ಯದ ಮನಸ್ಸು ಅವರ ಬೋಧನೆಗೆ ಒಳಪಟ್ಟು ಹೋಯಿತು. ಮರುದಿನ ಸಂಜೆ ಯಲ್ಲಿ ನಾನು ಬೀಚಿಗೆಂದು ಹೊರಡುವುದು, ಅದೇ ಸಮಯದಲ್ಲಿ ಅವರೂ ಹೋಟೆಲಿಗೆ ಚಕ್ರಕೊಟ್ಟು, ನನ್ನನ್ನು ಸಂಕೇತ ಸ್ಥಳದಲ್ಲಿ ಕಲಿಯುವುದು, ಅಲ್ಲಿಂದ ಇಬ್ಬರೊಂದಾಗಿ ಸಿನೆಮಕ್ಕೆ ಹೋಗಿ ರಾತ್ರಿ ಹತ್ತುಗಂಟೆಗೆ ಮನೆಗೆ ಮರಳುವುದು, ಎಂದು ಆ ರಾತ್ರಿಯಲ್ಲಿ ನಮ್ಮೊಳಗೆ ತಿರ್ಮಾನವಾಯಿತು.

ಹೀಗೆ ತೀರ್ಮಾನವಾದರೂ ನನ್ನ ಮನಸ್ಸಿನೊಳಗೆ ದಿಗಿಲೇ ಕೊರೆಯು ತ್ತಿದ್ದಿತು ರಾತ್ರಿ ಹತ್ತುಗಂಟೆಯ ವರೆಗೂ ನಾವು 'ಕಾಣೆ' ಯಾದರೆ ತಂದೆ-ತಾಯಿಗಳು ಎಷ್ಟು ದಿಗಿಲುಗೊಳ್ಳುವರೋ ! ಆಗ ನಾವು ಬಂದು ಅವರ ಭರ್ತ್ಸನೆಗಳನ್ನಿದಿರಿಸಬೇಕಲ್ಲವೇ ?

ಮರುದಿನ ಶನಿವಾರ ಸಂಜೆಯಲ್ಲಿ ಸರೋಜ ಸೀರಿಗಾಗಿ ಕೊಳಾಯಿ ಬದಿಗೆ ಹೋದ ಸಂದುನೋಡಿ ನಾನು “ ಅಮ್ಮಾ, ನಾನು ಕೊಂಚ ಬೀಚಿಗೆ ಹೋಗಿ ಬರುತ್ತೇನೆ. ” ಎಂದು ಹೊರಗಿಂದ ಹೊರಗೇ ಕೂಗಿ, ಅವಳ ಪ್ರತ್ಯುತ್ತರವನ್ನು ಕೂಡ ಕೇಳಿಕೊಳ್ಳದೆ ವೇಗವಾಗಿ ಹೊರಟುಬಿಟ್ಟೆನು !

೩

ತಿರುವಲ್ಲಿ ಕೋಣೆಯಿಂದ ಮೌಂಟು ರೋಡಿಗೆ ಹೋಗುವ ವಾಲಾಜಾ ರೋಡಿನಲ್ಲಿರುವ ಘೋಷಾ ಆಸ್ಪತ್ರಿಯ ಗೇಟಿನ ಬದಿಯಲ್ಲಿ ಅವರು ನನ್ನನ್ನು ಇದಿರುನೋಡುತ್ತ ನಿಂತಿದ್ದರು ಅವರನ್ನು ನೋಡುತ್ತಲೇ ನಾನು ಬೆಗಗು ವಡೆದೆನು. ಇಸ್ತ್ರಿಯ ಮಡಿಕೆಗಳಿಂದೊಪ್ಪುವ ಹೊಸ ಪಾಯಿಜಾಮಾ — ಓಪನ್ ಶರ್ಟುಗಳಿಂದ ಹೊಸಬರಾಗಿ ಕಂಗೊಳಿಸುತ್ತಿದ್ದರು ಪರಿಮಳಿಸುವ ಎಣ್ಣೆಯನ್ನು ತಡವಿ ನಯವಾಗಿ ಬಾಚಿ, ತೆರೆದೆರೆಯಾಗಿ ಕಾಣುವ ಆ ಕ್ರಾಪಿನ ಅಲಂಕಾರದ ಮುಖದ ಕಳೆಯನ್ನು ಸಿಗರೇಟಿನ ಹೊಂದಿಯಿಂದ ಬೆಳಗುಸು

ವಂತೆ ಕಾಣುತ್ತಿದ್ದರು. ಕಾಲಿನಲ್ಲಿ ರಬ್ಬರ್ ಶೂ ಮೆಟ್ಟಿದ್ದರು. ಪಾಯಿಜಾಮಾ ಸಿಗರೇಟು ಮೊದಲಾದ ಅವರ ಈ ಬಗೆಯ ವೇಷವನ್ನು ನಾನು ಈವರೆಗೂ ನೋಡಿರಲಿಲ್ಲ. ಆಶ್ಚರ್ಯದ ಬೆನ್ನಿಗೆ ನನಗಿಷ್ಟು ಜಿಗುಪ್ಸೆಯೇ ತೋರಿತು. ಅವರ ತುಟಿಗಳಲ್ಲಿ ಮಿನುಗಿದ ಆ ಮುಗುಳ್ನಗು ನನ್ನ ಜಿಗುಪ್ಸೆಯನ್ನು ಹಿಂದಕ್ಕೊತ್ತಿತು. ಆ ಮೇಲೆ ಅಲ್ಲಿಂದ ನಾವಿಬ್ಬರೂ ನಡೆಯುತ್ತಾ "ಪ್ರಭಾತ್" ಸಿನೇಮಾ ಥಿಯೇಟರಿನ ಕಡೆಗೆ ಸಾಗಿದೆವು. ಆಗ ನಾನು ಅವರ ಭೂಷಣವನ್ನೂ ನನ್ನ ಭೂಷಣವನ್ನೂ ಹೋಲಿಸಿ ನೋಡಿಕೊಂಡೆನು. ಅವರ "ಝೋಕಿ"ಗೆ ನನ್ನ 'ಷೋಕು' ತೀರ ಕಡಿಮೆಯೆನಿಸಿತು. ನಾನೇನೂ ಅವರಂತೆ ಪರಿಮಳ ತೈಲದಿಂದ ತಲೆ ಬಾಚಿರಲಿಲ್ಲ. ಖಾಲೀ ತೆಂಗಿನೆಣ್ಣೆಯಿಂದ ಬಾಚಿಕೊಂಡಿದ್ದೆ. ಜಡೆಯ ಕೊನೆಯಲ್ಲಿ ಬಣ್ಣದ ರಿಬ್ಬನು ನೇತಾಡುತ್ತಿತ್ತು. ಹಿಂದೆಲೆಯಲ್ಲಿ ಒಂದು ತುಂಡು ಕದಂಬವನ್ನು ಮುಡಿದಿದ್ದೆ. ನನ್ನ ಕಿವಿಯಲ್ಲಿರುವುದು, ಮುಖವನ್ನು ಚಕಚಕಗೊಳಿಸುವ ಸಿನಿಮಾಫ್ಯಾಶನ್ನಿನ ಹೊಸ ಮಾದರಿಯ ಲೋಲಾಕಲ್ಲ; ಸರ್ವಸಾಧಾರಣವಾದುದು. ಕುತ್ತಿಗೆಯಲ್ಲಿರುವ 'ಬೋರಿಸರ' ಕೂಡಾ ಗುಂಡುಗುಂಡಾದ ಮಣಿಗಳಿರುವ ಹಳ್ಳಿಯ ಮಾದರಿಯದು. ಇನ್ನು ಉಟ್ಟುಕೊಂಡಿರುವ ಪ್ರಿಂಟಿಂಗು ಸೀರೆಯೂ, ತೊಟ್ಟುಕೊಂಡಿರುವ ಅಂತಹದೇ ಆದ ರವಕೆಯೂ ವಿಶೇಷವಾಗೇನೂ ಇರಲಿಲ್ಲ. ಒಟ್ಟಾರೆ ಅವರ ಇಂದಿನ ಬಣ್ಣನೆಯ ಬೆಡಗಿಗೆ ಒಪ್ಪುವಂತಹ ಒನಪು ಒಯ್ಯಾರಗಳು ನನ್ನದೇನೂ ಸಾಲದೆಂದು ನನಗೇ ತೋರಿತು.

ಹೋಗುವಾಗ ನಾನು ಅವರನ್ನು ಕುರಿತು— ಅಬ್ಬ! ಈ ಡ್ರೆಸ್ಸೆಲ್ಲಾ ಎಲ್ಲಿತ್ತು? ಒಂದು ದಿನಾದರೂ ನಾನು ನೋಡಿಯೇ ಇಲ್ಲವಲ್ಲ? ಎಂದೆ.

ಹೌದು ನಿನ್ನ ತಂದೆಗೆ ಇದೆಲ್ಲ ಹಿಡಿಯುವಂಥಾದ್ದಲ್ಲವೆಂತ ನನಗೆ ಗೊತ್ತು. ಇಂಥಾ ಸಮಯ ಸಂದರ್ಭಗಳಿಗೆ ಬೇಕಾಗುತ್ತದೆಂತ ಗುಟ್ಟಾಗಿ ಹೊಲಿದು ಪೆಟ್ಟಿಗೆಯಲ್ಲಿಟ್ಟುಕೊಂಡಿದ್ದೆ."

"ಓಹೋ ! ಜೋರೇ ಇದ್ದೀರಿ ಹಾಗಾದರೆ ! ನೀವು ಸಿಗರೇಟು ಕೂಡಾ ಸೇದ್ತೀರಿಂತ ನಾನು ಕನಸಿನಲ್ಲಿಯೂ ನೆನೆಸಿರಲಿಲ್ಲ ! "

ಸಿಗರೇಟನ್ನೊಮ್ಮೆ ಜೋರಾಗಿ ಸೇದಿ, ನನ್ನನ್ನು ನೋಡಿ ಕಣ್ಣುಕಿಸಿದು ನಕ್ಕು ನನ್ನ ಮುಖದ ಕಡೆಗೇ ಉಫ್ಫೆಂದು ಹೊಗೆಯನ್ನೂಡಿ ಸಿಗರೇಟಿನ ತುಂಡನ್ನು ಬಿಸುಟರು.

"ಅಯ್ಯ! ಒಳ್ಳೇ ಅಭ್ಯಾಸ ಇದ್ದಹಾಗ ಕಾಣುತ್ತದಲ್ಲ!" ಎಂದೆನು

"ಪಾಸಾಗಿದ್ದೇನೆಂತ ಸರ್ಟಿಫಿಕೇಟ್ ಕೊಡ್ತ್ಯಾ?"

"ಸರ್ಟಿಫಿಕೇಟು ಕೇಳ್ತೀರಾದರೆ ಒಳ್ಳೇ ನುರಿತವರೆಂದೇ ಆಯಿತು. ಇಷ್ಟೇನೋ ಅಥವಾ ಇನ್ನೂ ಏನೇನೋ ಅಭ್ಯಾಸ ಉಂಟೋ?"

"ಯಾಕೆ? ನಿನಗೆ ಹೆದರಿಕೆಯೊ?........ ಇಕೋ, ಈ ಷಾಪಿನೊಳಗೆ ಹೋಗೋಣವೆ? ಬರುತ್ತ್ಯಾ?"— ಒಂದು ಷಾಪಿನ ಬದಿಯಲ್ಲಿ ಗಕ್ಕನೆ ನಿಂತು ಅವರೀಪ್ರಶ್ನೆಮಾಡಿದರು. ನೋಡಿದರೆ— ಬ್ರಾಂದೀ ಷಾಪು!

"ಅಯ್ಯೋ! ಇದೂ ಉಂಟೆ ನಿಮಗೆ?" ಎಂದು ಚೀರಿದೆ.

"ಇಲ್ಲಿಲ್ಲ! ಭಯಪಡಬೇಡ ಗಿರಿಜಾ! ಈವರೆಗೂ ಇಲ್ಲ. ಈಗ ನೀನೂ ಬರುತ್ತೀಯಾದರೆ, ಇಬ್ಬರೂ ಒಮ್ಮೆ ಅದರರುಚಿಯನ್ನೂ ನೋಡಿ ಬಿಟ್ಟು ಬಿಟ್ಟರಾಯ್ತು!

"ಬೇಡಪ್ಪಾ ನಿಮ್ಮ ದಮ್ಮಯ್ಯ!" ನಾನು ಮುಂದೆ ಚಿಗರೆಯಂತೆ ಹಾರಿ ಓಡಿದೆ. ಅವರೂ ನನ್ನ ಹಿಂದೆ ಬರುತ್ತ— "ಬೇಡದಿದ್ದರೆ ಬಿಡು. ಪ್ರಪಂಚದಲ್ಲಿ ಹುಟ್ಟಿದಮೇಲೆ, ಎಲ್ಲದರ ಸ್ಯಾಂಪಲ್ಲನ್ನೂ ಸ್ವಲ್ಪಸ್ವಲ್ಪ ನೋಡಿಯೇ ಬಿಡಬೇಕು!"

"ವಿಷವನ್ನೂ ಕೂಡ?"

"ಹಾಗಾದರೆ ಇಲ್ಲಿಗಾದರೂ ಹೋಗೋಣ ಬಾ." ಎಂದಂದು ಅವರು ಒಂದು ದೊಡ್ಡ ಹೋಟಲಿನ ಮೆಟ್ಟಿಲವನ್ನೇರಿದರು. ನಾನೂ ಅವರೊಡನೆಯೇ ಹೋಗುತ್ತ— "ನಮ್ಮದೇ ಹೋಟೆಲಿರುವಾಗ ಇದೊಂದು ಹುಚ್ಚು ಬೇರೆ ಯಾಕೆ?" ಎಂದೆ.

"ನಮ್ಮ ಗತಿಗೇಡಿನ ಹೋಟಲಿನಲ್ಲಿ ಇಂತಹ ಪ್ರೈವೇಟ್ ರೂಂ ಉಂಟೆ? ಐಸ್ಕ್ರೀಂ ಉಂಟೆ?"

ಸರಿ ಅಲ್ಲಿಯ, ಫ್ಯಾನು–ಕನ್ನಡಿ–ಕುರ್ಚಿ–ಮೇಜಿ–ಚಿತ್ರಪಟಗಳು ಮೊದಲಾದ ನಾಗರಿಕಾಲಂಕಾರಗಳಿಂದ ಜುಮ್ಮೆನಿಸುವ 'ಪ್ರೈವೇಟ ರೂಂ'ನೊಳಗೆ ಬೊಂಡಾ–ಹಲ್ವಾ–ಐಸ್ಕ್ರೀಂಗಳೊಂದಿಗೆ ನಮ್ಮ ಕಾಫೀ ಸೇವಾಲೀಲೆ ಮುಗಿಯಿತು. ಆ ಮೇಲೆ ಅವರು ಮುಂದಾಗಿ ಎದ್ದುಹೋಗಿ ಹೋಟೆಲ್ ಮ್ಯಾನೇಜರನೊಡನೆ ಏನೋ ಮಾತಾಡಿಬಂದು, ಬಳಿಕ ನನ್ನನ್ನು ಕರೆದು ಕೊಂಡು ಅಲ್ಲಿಂದ ಹೊರಟರು. ಮದರಾಸಿನ ಪಳಗಾಟದಲ್ಲಿ ಸೇರಿಹೋದಂತಹ

ಅವರ ರೀತಿ ನೀತಿಗಳನ್ನು ಕಂಡು– "ಅಲ್ಲಾ! ನೀವು ಮದರಾಸಿಗೆ ಬರುವಾಗ ಏನೂ ತಿಳಿಯದವರ ಹಾಗೆ ಇದ್ದಿರಲ್ಲಾ? ಎಷ್ಟು ಬೇಗನೇ ಈ ಪಟ್ಟಣದ ನಾಗರಿಕತೆಯಲ್ಲಿ ಪಳಗಿ ಬಿಟ್ಟಿರಿ?" ಎಂದೆ ನಾನು.

"ಮದರಾಸಿನಲ್ಲಿ ಹುಟ್ಟಿ ಬೆಳೆದ ಹೆಣ್ಣನ್ನು ಮದುವೆ ಮಾಡಿಕೊಂಡ ಮೇಲೆ ಹಾಗೆ ಪಳಗದಿದ್ದರೆ ಆಗುತ್ತದೆಯೇ?" ಎಂಬುದು ಅವರ ಉತ್ತರ.

"ಹೋಗೀ ಅಂದ್ರೆ! ನನಗೆ ಇದೆಲ್ಲಾ ಗೊತ್ತೇ ಇಲ್ಲ. ಯಾರಾದರೂ ನಿಮ್ಮ ಮಾತು ಕೇಳಿದರೆ ನಾನೇ ನಿಮಗಿಂತ ಜೋರೆಂದುಕೊಂಡಾರು!"

"ಓಹೊ!! ಅಂತೂ ನಾನು ಈಗ ನಿನಗಿಂತ ಗಟ್ಟಿಗನೆಂದಾಯಿತು!"

"ಆಯಿತು!"

ಸಿನಿಮಾ ಥಿಯೇಟರಿಗೆ ಮುಟ್ಟಿದೆವು. ಬಾಕ್ಸಿನ ಟಿಕೆಟ್ಟನ್ನು ಪಡೆದು ಸಿನಿಮಾ ನೋಡಿದ್ದೂ ಆಯಿತು. ಆಹಾ! ಮದುವೆಯಾದ ಮೇಲೆ ನಾವು ಮನಬಿಚ್ಚಿ ಮಾತಾಡಿಕೊಂಡುದೆಂದರೆ ಆ ದಿನವೊಂದೇ! ಅಲ್ಲಿ ಯಾರೂ ನಮ್ಮನ್ನು ಕೇಳುವವರಿರಲಿಲ್ಲ. ನಾವೇ ನಾವು! ಅಂದು ನನಗೆ ಆನಂದದ ಮಧುವುಂಡಂತಾಯಿತು. ಯೋಚನೆಗಳಿಗೆ ತೂಕಡಿಕೆ ಬಂತು. ಆ ಪರ ವಶತೆಯಲ್ಲಿ ಅವರು ಹೇಳಿದುದಕ್ಕೆಲ್ಲ ನಾನು ಒಪ್ಪಿಯೇ ಬಿಟ್ಟೆನು. "ಗಿರಿಜ, ಈದಿನ ನಾವು ಮನೆಗೆ ಹೋಗುವುದೇ ಬೇಡ. ನಾಳೆ ಬೇಗ್ಗೆ ಹೋಗಿ ಸೇರಿದ ರಾಯಿತು." ಎಂದರವರು ಕಟ್ಟಕಡೆಗೆ.

"ಮತ್ತೆಲ್ಲಿಗೆ?"........ ನಾನು ಕಣ್ಣರಳಿಸಿ ಕೇಳಿದೆ.

"ಕೃಷ್ಣಾಲೋಜಿನಲ್ಲಿ ಒಂದು ಕೋಣೆಗೆ ಏರ್ಪಾಡು ಮಾಡಿದ್ದೇನೆ. ಹೇಗೂ ಗೂಡಿನಿಂದ ಹೊರಗೆ ಹಾರಿಬಿಟ್ಟಿದ್ದೇವೆ. ಈ ಒಂದುದಿನ ಸ್ವತಂತ್ರ ವಾಗಿ ಸುಖಪಟ್ಟದ್ದು ಬಂತು!"

"ಅಯ್ಯೋ! ಮನೆಯಲ್ಲಿ ತಂದೆ–ತಾಯಿ ಎಲ್ಲರೂ ಗಾಬರಿಯಾದರೆ?"

"ಹುಚ್ಚಿ! ಯಾಕೆ ಗಾಬರಿಯಾಗುತ್ತಾರೆ? ನಾನೂ ನೀನೂ ಒಟ್ಟಿಗೇ ಹೊರಟದ್ದೆಂತಲೇ ತಿಳಕೊಂಡಾರು ಬುದ್ಧಿಉಳ್ಳವರಾದರೆ!"

"ಬೇಡಾಂದರೇ! ಹೇಳದೆ ಕೇಳದೆ ಹೀಗೆಲ್ಲಾ ತಿರಿಯುವುದು ಸರಿಯಲ್ಲ, ಚಂದವೂ ಅಲ್ಲ! ಕಷ್ಟಪಟ್ಟು ಸಂಪಾದಿಸಿದ ಹಣವನ್ನು ಸುಮ್ಮನೆ ಸುರಿಯು ವುದೇ?"

"ಅಬ್ಬಬ್ಬ! ದೊಡ್ಡ ಅಜ್ಜಿ ಪುರಾಣವೇ ಕಲ್ತಿದ್ದಿ ನೀನು! ಗಂಡ

ಹೆಂಡಿರು ಒಂದಾಗಿರುವುದನ್ನು ತಪ್ಪೆಂದು ಊರನ್ನುವುದು ? ಇನ್ನೊಂದು ವಿಷಯ ಗಿರಿಜಾ; ಇದೇ ನಿನ್ನೊಡನೆ ಮಾತಾಡಲಿಕ್ಕುಂಟು ಅದೆ. "

" ಏನೋ ಅದು ? "

" ನನಗೆ ನಿಮ್ಮಲ್ಲಿರಲು ಇಷ್ಟವೇ ಇಲ್ಲ. ಬೇರೆ ಕೆಲಸ ನೋಡಿಕೊಂಡು ಹೋಗಬೇಕೆಂದಿದ್ದೇನೆ ನೀನೂ ನನ್ನ ಜತೆಯಲ್ಲಿ ಹೊರಡಬೇಕು. "

ಫಕ್ಕನೆ ನನ್ನ ಎದೆಗೊಂದು ಗುಂಡಿನಂತೆ ತಾಗಿತು ಈ ಮಾತು. " ಅಯ್ಯೋ " ಎಂದು ಉದ್ಗರಿಸಿದೆ ಸ್ವಲ್ಪ ಹೊತ್ತು ಏನು ಹೇಳಲಿಕ್ಕೂ ತೋರಲಿಲ್ಲ. ನನ್ನ ತಂದೆ ನನ್ನನ್ನು ಇವರಿಗೆ ಕೊಟ್ಟು ಮದುವೆ ಮಾಡಿದ ಯೋಚನೆಗೂ, ಇವರ ಈ ಯೋಚನೆಗೂ ತುಂಬ ವ್ಯತ್ಯಾಸವಿತ್ತು. ಒಂದಕ್ಕೊಂದು ಎಷ್ಟು ವಿರೋಧ ! " ಛೇ, ಅದೆಲ್ಲಾ ಬೇಡ ! ಅಪ್ಪ ಒಪ್ಪಲಿಕ್ಕೇ ಇಲ್ಲ. " ಎಂದು ಆ ಮೇಲೆ ಹೇಳಿದೆ

" ಯಾಕೆ ಒಪ್ಪಲಿಕ್ಕಿಲ್ಲ ? ಅಸಲು ಅವರ ಒಪ್ಪಿಗೆಯಾದರೂ ಯಾಕೆ ಬೇಕು ? ನನಗೆ ನಿಮ್ಮಲ್ಲಿರಲಿಕ್ಕೆ ಆಗುವುದಿಲ್ಲವೆಂದರೆ ನನ್ನನ್ನು ಹೇಗೆ ತಡೆಯುತ್ತಾರೆ ? ನನ್ನ ಗಂಡನೊಂದಿಗೆ ನಾನೂ ಹೋಗುವೆನೆಂದರೆ ನಿನ್ನನ್ನು ತಡೆಯಲಿಕ್ಕೆ ಅವರಿಗೆ ಯಾವ ನ್ಯಾಯವಿದೆ ? "

" ಅಯ್ಯೋ ಇದೆಂತಹ ಮಾತು ? ಅಪ್ಪ-ಅಮ್ಮಂದಿರೊಡನೆ ವಿರೋಧ ಮಾಡಿಕೊಂಡು ನಾನು ನಿಮ್ಮೊಂದಿಗೆ ಹೊರಡಬೇಕೆ ? "

" ಸಂದರ್ಭ ಬಂದರೆ ಹಾಗೂ ಹೊರಡಬೇಕು ಮತ್ತೆ ! "

ಏನು ಹೇಳಲಿ ? ಈ ಆನಂದದ ಪ್ರಸಂಗದಲ್ಲಿ ಇದೆಂಥ ಹಾಳುಮಾತು ಬಂತು ? ಒಂದು ನಿಮಿಷದ ಮೊದಲಿದ್ದ ನನ್ನ ಸಂತೋಷವನ್ನೆಲ್ಲಾ ದೀರ್ಘಾಲೋಚನೆ ಉಕ್ಕೆದ್ದು ಕೊಚ್ಚಿಕೊಂಡು ಹೋಯಿತು. ಈ ಅವಸ್ಥೆಯಲ್ಲಿ ಸಿನಿಮಾ ಮುಗಿದು ನಾವು ಅಲ್ಲಿಂದ ಹೊರಟೆವು. ಮತ್ತೆ ಅವರು ಕೃಷ್ಣಾ ಲೋಜನ್ನೆ ಹೊಕ್ಕರು. " ಬೇಡ ಬೇಡ ಮನೆಗೆ ಹೋಗೋಣ " ಎಂಬ ನನ್ನ ತಳ್ಳಂಕವನ್ನು ಅವರ ಬಲವಂತವೇ ಗೆದ್ದುಕೊಂಡಿತು. ಅಲ್ಲಿಯೇ ಬಾಡಿಗೆಯ ಕೋಣೆಯಲ್ಲಿ ನಮ್ಮ ಊಟವಾಯಿತು. ರಾತ್ರಿಯನ್ನು ಬಹಳ ಆಮೋದದಿಂದ ಕಳೆಯಬೇಕೆಂದು ಅವರ ಬಯಕೆ. ಅಂದಿನ ಅವರ ಉತ್ಸಾಹವೆಷ್ಟಿತ್ತೆಂಬುದು, ಮೇಲಿಂದಮೇಲೆ ಸೇದಿ ಸೇದಿ ಬಿಡುವ ಆ ಸಿಗರೇಟಿನ ಹೊಗೆಯಿಂದ ಗೊತ್ತಾಗುತ್ತಿದ್ದಿತು. ಆದರೆ ನನಗೆ ಆ ಸ್ಥಿತಿಯಲ್ಲಿ ಎಲ್ಲಿಂದ ಬಂದೀತು

ಉತ್ಸಾಹ ? ‘ ಬೆಕ್ಕಿಗೆ ಆಟ, ಇಲಿಗೆ ಪ್ರಾಣಕಾಟ ’ ಎಂಬಂತೆ, ಅವರು ಅತ್ಯುತ್ಸಾಹದಿಂದ ಮತ್ತೆ ಅದೇ ಹಾಳು ಮಾತಿಗೇ ಬಂದರು. “ಏನು ಹಾಗಾದರೆ ? ನೀವು ನಮ್ಮಲ್ಲಿಂದ ಹೊರಟು ಹೋಗುವುದು ಖಂಡಿತವೇ ಆಯಿತೆ? ” ಎಂದು ನಾನು ಕೇಳಿದೆ.

“ ಹೋ! ಖಂಡಿತವೆ! ”

“ ಯಾವಾಗ ? ”

“ ಯಾವಾಗೆಂದರಾವಾಗ ! ನೀನು ಮನಸ್ಸು ಮಾಡಿದಿಯಾದರೆ ಈಗಿಂದೀಗಲೇ ! ಮನೆಗೆ ಹೋಗದೆ ಹೀಗೆಯೇ ಹೋಗಿಬಿಡಬಹುದು. ಇಲ್ಲಾ ನೀನು ಯಾವಾಗ ಬರುತ್ತಿಯೋ ಆವಾಗ ಹೊರಡುವುದು. ”

“ ನಾನು ಬಾರದಿದ್ದರೆ ? ”

“ ನೀನು ಬಾರದಿದ್ದರೆ ನಾನೊಬ್ಬನೇ ಆದರೂ ಹೊರಡುವುದು ಹೊರಡುವುದೇ ! ”

“ ಎಲ್ಲಿಗೆ ಹೋಗುವುದು ? ”

“ ಎಲ್ಲಿ ಕೆಲಸ ಸಿಕ್ಕುತ್ತದೋ ಅಲ್ಲಿಗೆ ! ”

“ ಎಂತಹ ಕೆಲಸ ? ”

“ ಎಂತಹ ಕೆಲಸವೋ ಅಂತಹ ಕೆಲಸ ! ”

“ ಇದೆಂಥ ಮಾತು ? ಒಂದು ಗಟ್ಟಿಮುಟ್ಟಿ ಇಲ್ಲ ನಿಮ್ಮದು ! ”

“ ಅದೆಲ್ಲ ಬೇಡದ ವಿಚಾರ ನಿನಗೇಕೆ ? ನಾನು ಹೇಗಾದರೂ ಕಾಪಾಡಿದರಾಯಿತಲ್ಲವೇ ನಿನ್ನನ್ನು ? ”

“ ನನ್ನ ಸ್ಥಿತಿ ಹಾಗಿಲ್ಲವಲ್ಲ; ನೀವೇ ನೋಡಿ. ಈಗ ಟ್ರೈನಿಂಗ ಕಲೀತಾ ಇದ್ದೇನೆ........ ”

“ ಅದೇ ಬೇಡಾ ಅನ್ನೋದು ನಾನು ನೀನು ಕಲ್ತು ಪಾಸಾಗಿ ಉದ್ಯೋಗ—ಗಿದ್ಯೋಗ ಏನೂ ಮಾಡಕೂಡದು. ನಾನು ಮೊದಲೇ ಒಮ್ಮೆ ಹೇಳಿದೆ—ನಿನ್ನ ವಿದ್ಯೆ ಸಾಕು, ಸುಮ್ಮನೆ ಕಲಿಸಬೇಡಿ ಅಂತ ಹೆಂಡತಿ. ಎಂಬವಳು ಗಂಡ ಹೇಳಿದಹಾಗೆ ಕೇಳದಿದ್ದರೆ, ಮತ್ತೆ ಯಾಕೆ ಆ ಹೆಂಡತಿ ? ”

“ ಏನು ? ನಾನು ಕಲಿಯುವುದು ನಿಮಗಿಷ್ಟವಿಲ್ಲವೆ ? ”

“ ಇಲ್ಲ ”

ಹಾ ! ಎಂತಹ ಕಠಿನ ಉತ್ತರ ! ನಾನು ಮರ್ಮಾಹತಳಾಗಿ ಹೋದೆ.

ಇಂತಹ ಮಾತನ್ನು ಕೇಳಲಿಕ್ಕಾಗಿಯೇ ನಾನಿಂದು ಮನೆಯಿಂದ ಹೊರಟೆನೆ ? ಏಕೆ ಹೊರಡುವ ಬುದ್ಧಿ ಹುಟ್ಟಿತೆಂದು ಪಶ್ಚಾತ್ತಾಪಪಡಲಾರಂಭಿಸಿದೆ. ಈ ಸಂದಿಗ್ಧ ಸ್ಥಿತಿಯಲ್ಲಿ ನನ್ನಿಂದ ಖಂಡಿತ ಉತ್ತರವೆಂತು ಹೊರಟೀತು ? ಸರಿಯಾದ ಉತ್ತರವು ದೊರೆಯದಿದ್ದುದರಿಂದ ಅವರಿಗೂ ಬೇಸರವಾಗಿರ ಬೇಕು.

ಒಂದು ಘೋರ ರಾತ್ರಿಯಂತೆ ಆ ರಾತ್ರಿ ಹೇಗೋ ಕಳೆದು ಹೋಯಿತು. ಮರುದಿನ ಬೆಳಿಗ್ಗೆ ಆ ಹೋಟೆಲಿನಿಂದ ಹೊರಡುವಾಗ ಅಲ್ಲಿಗೆ ಹೊಕ್ಕಾಗಿನಷ್ಟು ಉತ್ಸಾಹವೂ, ಧೈರ್ಯವೂ ನನಗೆ ಇರಲೇ ಇಲ್ಲ. ಕಾಲುಗಳು ನಡುಗು ತ್ತಿರುವಂತೆನಿಸಿತು. ಆದರೆ ಅವರೇನೋ ಧೈರ್ಯವಾಗಿಯೇ ಇದ್ದರು. " ಯಾಕೆ ಹೀಗೆ ಹೆದರಿ ಸಾಯುತ್ತಿ ನಿನ್ನಪ್ಪ ಅಮ್ಮನಿಗೆ ? ಗಂಡನೊಂದಿಗೆ ಒಂದು ರಾತ್ರಿ ತಿರುಗಾಡಿದರೆ ಯಾರು ತಲೆ ತೆಗೆಯುವರೋ ನೋಡುವಾ, ಬಾ " ಎಂದು ಅವರು ಧೈರ್ಯಹೇಳುತ್ತಾ ನನ್ನನ್ನು ಕರೆದುಕೊಂಡು ಮನೆಗೆ ಮುಟ್ಟಿದರು. ಏನಾದರೂ ಅವರಿಗೇನು ಭಯ ? ಅಳಿಯನ ಗೆಲ್ಮೆ ! ಸಿಕ್ಕುಬಿದ್ದು ಸಾಯುವವಳು ನಾನು !

ತಿರುವಲ್ಲಿ ಕೋಣೆಗೆ ಬಂದಕೂಡಲೇ ಅವರು ನಮ್ಮ ಮನೆಗೆ ಸಮೀಪ ದಲ್ಲಿರುವ ಒಂದು ಬೀಡೀ ಅಂಗಡಿಯೊಳಗೆ ಹೊಕ್ಕು, ತಮ್ಮ ಪಾಯಿಜಾಮಾ ಮೊದಲಾದ ಡ್ರೆಸ್ಸುಗಳನ್ನು ಬಿಚ್ಚಿ, ಅಲ್ಲಿದ್ದ ಪೆಟ್ಟಿಗೆಯಲ್ಲಿ ಅಡಗಿಸಿಟ್ಟು, ಮಾಮೂಲ ಬಟ್ಟೆ ಶರ್ಟುಗಳನ್ನು ಹಾಕಿಕೊಂಡು ಮನೆಗೆ ಬಂದರು. ಆ ಅಂಗಡಿಯವನು ಅವರ ಸ್ನೇಹಿತನೆಂದೂ, ಅಲ್ಲಿ ಅವರದೊಂದು ಪೆಟ್ಟಿಗೆ ಯನ್ನಿಟ್ಟಿರುವರೆಂದೂ ನನಗೆ ಆಗ ತಾನೇ ಗೊತ್ತಾಯಿತು.

೪

ಮನೆಗೆ ಮುಟ್ಟುವಾಗ ಬೆಳಿಗ್ಗೆ ಎಂಟುಗಂಟೆ. ಮನೆಯಲ್ಲಿ ಬಹಳ ಗಾಬರಿಯಾಗಿದ್ದರು. ಇತರ ಬಿಡಾರಿಗರೂ ಉದ್ವಿಗ್ನತೆಯಿಂದ ನೋಡುತ್ತಿ ದ್ದರು. ಬೀದಿಯಲ್ಲಿ ನಮ್ಮ ತಲೆ ಕಾಣುತ್ತಲೇ "ಹೋ ಬಂದರು" ಎಂದು ಪಕ್ಕದ ಬಿಡಾರಿಗರು ಕೂಗಿದರು. " ಎಲ್ಲಿಗಯ್ಯಾ ಇಬ್ಬರೂ ಹೊರಟದ್ದು ಸವಾರಿ ? " ಎಂದು ಒಮ್ಮೆಗೇ ನಾಲ್ಕಾರು ಮಂದಿ ಕೇಳಿಬಿಟ್ಟರು. ನನಗೆ ನಾಚಿಕೆಯಿಂದ ಸತ್ತಹಾಗಾಯಿತು. ತಲೆಯನ್ನು ಪೂರಾ ತಗ್ಗಿಸಿಕೊಂಡು ಒಳಗೆ ಓಡಿಬಿಟ್ಟೆ. ಮುಂಗೋಪಿಗಳಾದ ನನ್ನ ತಂದೆ " ಎಲ್ಲಿಗೆ ಓಡಿದ್ದೇ

ಹೀಗೆ ಹೇಳದೆ ಕೇಳದೆ ?" ಎಂದು ಗರ್ಜಿಸಿದರು. ನಾನು ಸೀದಾ ಹೋಗಿ ತಾಯಿಯ ಮಡಿಲಲ್ಲಿ ಮುಖವನ್ನಿಟ್ಟು ಗಳಗಳನೆ ಅಳಲಾರಂಭಿಸಿದೆನು.

ತಂದೆ ಬಡಬಡನೆ ಬಯ್ಯುತ್ತಲೇ ಇದ್ದರು. "........ಹೀಗೂ ಮಾಡುವುದುಂಟೆ ? ರಾತ್ರಿ ಪೂರಾ ನಾವೆಲ್ಲಾ ಬಹಳ ಗಾಬರಿಯಾಗಿ ಹೋದೆವೆಲ್ಲ! ಈಗ ಬೆಳಿಗ್ಗೆ ಪೋಲೀಸಿಗೆ ತಿಳಿಸೋದಾ ಏನು ಮಾಡೋದು ಅಂತ ಕಂಗಾಲಾಗಿ ಹೋದೆ. ಏನೋ ವೆಂಕಟೇಶ! ಎಲ್ಲಿಗೋ ಹೋದದ್ದು ರಾತ್ರಿ ?"

"ಎಲ್ಲಿಗಿಲ್ಲ ಮಾವಾ, ಸಿನೆಮಾಕ್ಕೆ ಹೋಗುವಾಂತ ಹೋದದ್ದು" ವೆಂಕಟೇಶರಂದರು.

"ಸಿನೆಮಕ್ಕೆ! ಹೇಳದೇಕೇಳವೆ ನನ್ನ ಹುಡುಗೀನ ಕಟ್ಟಿಕೊಂಡು ? ಅದೇಕೋ ಹಾಗೆ ಮಾಡಿದಿ ?"

"ಏನೋ ಮಾಡಿದೆ! ಭಾರಿ ದೊಡ್ಡ ತಪ್ಪಾಗಿಹೋಯ್ತೋ ಅದು ?"

"ಮತ್ತಲ್ಲದೇನೋ! ಹ್ಞು! ಮದ್ರಾಸಿನ ಗಾಳಿ! ಅಷ್ಟು ಬೇಗದಲ್ಲಿ ಹೀಗೂ ಒಂದು ಸಿನೆಮದ ಹುಚ್ಚೆ ? ಪೋಕ್ರೀ ಹಾಗೆ ಹೇಳದೇಕೇಳದೆ ಹುಡುಗೀನ ಎಳಕೊಂಡು ಓಡೋದೆ ?"

"ನಾನೇನೂ ಎಳಕೊಂಡು ಓಡಿಲ್ಲ ನಿಮ್ಮ ಹುಡುಗೀನ! ಅವಳೇ ಬರ್ತೀನೇ ಅಂದಳು; ಕರಕೊಂಡು ಹೋದೆ."

"ಆಯ್ತು! ಇಡೀ ರಾತ್ರಿ ಎಂಥಾ ಸಿನೇಮಾನೋ ಅದು ?"

ಫಸ್ಟ್ ಶೋ ತಪ್ಪಿಹೋಯ್ತು ಸೆಕೆಂಡ ಶೋ ಮುಗಿವಾಗ ಮಧ್ಯರಾತ್ರಿ. ಮನೇಗೆ ಬರೋದಂದ್ರೆ ಹ್ಯಾಗ ? ಬಸ್ಸಾ ಟ್ರಾಮಾ ? ಕಡೆಗೆ ಅಲ್ಲಿಯೇ ಒಂದು ಅಂಗಡಿಯ ಕೋಣೆಯಲ್ಲಿ, ರಾತ್ರಿ ಬೆಳಗ ಮಾಡಿಕೊಂಡು ಈಗ ಬಂದಿದ್ದೇವೆ."

"ಮಾನವಿದೆಯೇನೋ ನಿನಗೆ ಕಂಡಕಂಡಲ್ಲಿ ಮಲಗಲಿಕ್ಕೆ ? ಶತ ಪೋಕ್ರಿಯಾದಿ ನೀನು! ಏನೂ ಅರಿಯದ ಹುಡುಗಿಯ ಮನಸ್ಸನ್ನು ಕೂಡಾ ಕೆಡಿಸಿ, ಎಳೆಯುತ್ತೀಯಾ! ನೀನು ಒಳ್ಳೇ ಯೋಗ್ಯಾಂತ ತಿಳ್ಕೊಂಡು, ನನ್ನ ಹೋಟಲಲ್ಲಿ ನಿನ್ನನ್ನಿಟ್ಟು, ಮನೆಯಲ್ಲಿ ಅನ್ನಾಹಾಕಿ, ನನ್ನ ಮಗಳನ್ನೆ ನಿನಗೆ ಧಾರೆ ಎರೆದುಕೊಟ್ರೇ ಹೀಗೋ ಮಾಡೋದು ನೀನು ಹಾಳು ಬುದ್ಧಿ ? ಒಂದಿಷ್ಟಾದರೂ ಕೃತಜ್ಞತೆ-ವಿಶ್ವಾಸಾ ಇದೆಯೇನೋ ನಿನಗೆ ? ನಿನ್ನನ್ನು ನಂಬಿ ನಾನು, ನಿನ್ನನ್ನು ಗಲ್ಲದ ಮುಂದೆ ಕೂಡಿಸಿಟ್ರೆ ಗಲ್ಲದ ದುಡ್ಡೆಲ್ಲ

ಎತ್ತಿಕೊಂಡು ಪೋಲೀಮಾಡ್ತಿದ್ದಿಯಾ! ಏನೋ ಇದಕ್ಕೆ ಅರ್ಥ ?'' — ತಂದೆ ಕಠಿನವಾಗಿ ಸವಾಲು ಹಾಕಿಬಿಟ್ಟರು.

"ನನಗೆ ಖರ್ಚಿಗೆ ಹಣಬೇಕಾಯ್ತು. ಇಪ್ಪತ್ತೈದು ರೂಪಾಯಿ ತೆಗೆದಿದ್ದೇನೆ. ನನ್ನ ಸಂಬಳದಲ್ಲಿ ವಜಾ ಮಾಡಿಕೊಳ್ರೀ!"

"ಎಂಥಾಮಾತೋ ಇದು ? ನೀನೊಳ್ಳೇ ಯೋಗ್ಯಾ, ಈ ಹೊಟಿಲನ್ನೆಲ್ಲಾ ನಿನಗೇ ಒಪ್ಸಿಬಿಡಬೇಕೂಂತ ನಾನಿದ್ರೆ, ಈಗ್ಲೇ ಈ ಹೊಟ್ಲೆಲ್ಲಾ ನಿಂದೂಂತ ತಿಳಕೊಂಡು ಬಿಟ್ಟಿಯೇನೋ ಮಂಗ ?''

"ಬೇಡ ಬೇಡ ಮಾವಾ, ನಿಮ್ಮ ಹೊಟ್ಲೂಗಿಟ್ಲೂ ಯಾವುದೂ ನನಗೆ ಬೇಡ. ನಾನು ಹೋಗಿ ಎಲ್ಲಿಯಾದ್ರೂ ಬೇರೆ ಕೆಲ್ಸಾ ನೋಡಿಕೊಂಡೇನು!"

"ಓ! ಅಷ್ಟರಮಟ್ಟಿಗೂ ಬಂದಿಯಾ ?"

"ಮತ್ತೇನು ಮಾವಾ ಕಂಡಾಬಟ್ಟಿ ಮಾತಾಡಿದರೆ? ನಾನು ಊರಿಂದ ಬಂದಾಗ ನಿಮ್ಮ ಹೋಟಲಲ್ಲಿ ಕೆಲಸವಿದೇಂತ ನಂಬಿಕೊಂಡೇ ಬಂದದ್ದೊ ?"

ನನಗೇ ಆಶ್ಚರ್ಯವಾಯಿತು:— ಅವರು ಇಷ್ಟು ಧೈರ್ಯದಿಂದ ತಂದೆಯನ್ನಿದಿರಿಸಿ ಮಾತಾಡುವುದನ್ನು ನೋಡಿ. ಈ ಮೊದಲು ತಂದೆ ಅವರನ್ನು ಎಷ್ಟೋ ಬಾರಿ ಬೈದಿದ್ದರು. ಇವರು ಈ ರೀತಿಯಾಗಿ ಎಂದೂ ಉತ್ತರ ಕೊಟ್ಟಿಲ್ಲ. ಅಂತೆಯೇ ತಂದೆಗೂ ಆಶ್ಚರ್ಯವಾಗಿರಬೇಕು. ಅವರು ಸ್ವಲ್ಪ ಹೊತ್ತು ಮೂಕರಾಗಿ, ಬಳಿಕ ಸ್ವಲ್ಪ ಸಮಾಧಾನದ ಸ್ವರದಲ್ಲಿ— "ಒಳ್ಳೇ ಗಟ್ಟಿಗನಾಗಿದ್ದಿ ಈಗ ನೀನು! ಹೀಗೆ ಮಾತಿಗೆಮಾತು ಆಡಲಿಕ್ಕೆ ಬಹಳ ಚೆನ್ನಾಗಿ ಕಲಿತಿರುವಿಯಪ್ಪ! ಆದರೆ ಯೋಚನೆಮಾಡಿ ಮಾತಾಡಬೇಕು ನೋಡು ಹಾಗೆಲ್ಲಾ ಹೋಗಿಬಿಡಲಿಕ್ಕೆ ಇನ್ನೂ ನಿನಗೆ ಸಾಧ್ಯವಿಲ್ಲ ಹೋದರೆ ನಿನಗೆ ಒಳ್ಳೆಯದಾಗಲಿಕ್ಕೂ ಇಲ್ಲ. ಆ ಯೋಚನೆಯನ್ನೇ ಬಿಟ್ಟುಬಿಡು. ಅದಲ್ಲವೋ ನಿಮಗೆ ಸಿನೆಮಾಕ್ಕೆ ಹೋಗಬೇಕಂತ ಇದ್ರೆ, ಹೇಳಿಕೇಳಿ ಹೋಗಿರ್ತಿದ್ರೆ ಇಷ್ಟೆಲ್ಲಾ ಗಾಬರಿಗೆ ಕಾರಣವೇ ಆಗ್ತಿರಲಿಲ್ಲ!" ಎಂದೆಂದು ತಾಯಿಯನ್ನು ಶರಣುಹೊಕ್ಕಿರುವ ನನ್ನನ್ನು ನೋಡಿ,— "ಏನೇ ನಿನಗೂ ಬುದ್ಧಿ ಎಲ್ಲಿ ಹೋಯ್ತೇ ಗಿರಿಜಾ! ಮನೇಲಿ ಗಾಬ್ರಿಯಾಗ್ತಾರೇಂತ ಯೋಚನೇನೇ ಬರಲಿಲ್ವೇ ನಿನಗೆ ?'' ಎಂದರು.

ನಾನೇನೂ ಮಾತೇ ಆಡಲಿಲ್ಲ.

ನನ್ನ ತಾಯಿಯೆಂದಳು ನನ್ನ ತಲೆಯನ್ನು ತಡವುತ್ತ— "ಏನೋ

ಆಯ್ತೂ ಹೋಯ್ತು ಬಿಡಿ ಇನ್ನು ಈ ಮಾತು ಮೊದಲೇ ನಮ್ಮೊಡನೆ ಹೇಳ್ತಿದ್ರೆ ನಾವು ಒಪ್ಲಿಕ್ಕಿಲ್ಲಾಂತ ತಿಳ್ಕೊಂಡ್ವೋ ಏನು ಮಣ್ಣೋ! ನಾವೆಲ್ಲಾ ಗಾಬ್ರಿಯಾಗ್ತೇವೆಂತ ತಿಳ್ಕೊಳ್ಳಿಕ್ಕೆ ರಾತ್ರಿ ಮನೆಗೆ ಬರುವ ಆಲೋಚ್ನೇಲೇ ಹೋಗಿದ್ದಾರು. ಇನ್ಮೊಮ್ಮೆ ಹೀಗೆ ಹುಚ್ಚಾಟ ಮಾಡದಿದ್ದರಾಯ್ತು!"

ತಂದೆಯೂ ಶಾಂತರಾದರು. ಮತ್ತೆಯೂ ಕೆಲವು ಬುದ್ಧಿಮಾತುಗಳನ್ನು ಹೊರಡಿಸುತ್ತಾ ಶಾಂತರಾದರು. ನನ್ನ ಮೇಲೆ ತುಂಬ ಅಕ್ಕರೆಯುಳ್ಳ ಅವರು ಬೇಗನೇ ಶಾಂತರಾಗಿ ನನ್ನ ಗಲ್ಲಕ್ಕೊಂದು ಸಣ್ಣ ಪೆಟ್ಟುಕೊಟ್ಟು ನಗುತ್ತ—"ಏನೇ ನೀನು ಬಹಳ ತಿಳುವಳಿಕೆಯುಳ್ಳವಳಂತ ನಾನು ಮಾಡಿದರೆ ಅಬ್ಬಾ! ಹುಡುಗಿಯರೆಲ್ಲಾ ಬೆಳೆದುಬಿಟ್ಟರೆ, ಗಂಡ ಎಂಥವನೇ ಇರಲಿ, ಅವನ ಪಕ್ಷವನ್ನೇ ಕಟ್ಟಿಕೊಳ್ಳೋದಂತ ಕಾಣುತ್ತದೆ! ಅವನು ಹೇಳಿದ ಹಾಗೆಯೇ ಹೇಳದೆ ಕೇಳದೆ ಹೊರಟೇಬಿಟ್ಟಿಯಲ್ಲ ನೀನು?" ಎಂದರು. ಆಹಾ! ಇಂತಹ ನಲ್ಮೆಯ ತಾಯ್ತಂದೆಯರನ್ನು ಬಿಟ್ಟು, ಇವರಿಗೆ ವಿರೋಧವಾಗಿ ನಾನು ಗಂಡನೊಂದಿಗೆ ಓಡಿ ಹೋಗಬೇಕೆ?

ಆ ದಿನಕ್ಕೆ ವೆಂಕಟೇಶರೂ ಬಾಯಿ ಮುಚ್ಚಿಕೊಂಡು ಸುಮ್ಮನಾಗಿ ಬಿಟ್ಟರು. ಅವರು ಮಾತಾಡಿದ ಧೋರಣೆಯನ್ನು ನೋಡಿ, ಆ ದಿನವೇ ದೊಡ್ಡ ಜಗಳವನ್ನು ಎಬ್ಬಿಸಿ ಎಲ್ಲಿ ಹೊರಟುಬಿಡುವರೊ ಎನಿಸಿತ್ತು ನನಗೆ! ಅಷ್ಟಕ್ಕೆ ತಕ್ಕ ಮುನ್ನೇರ್ಪಾಡಾಗದಿದ್ದುದರಿಂದಲೋ, ಧೈರ್ಯವಿಲ್ಲದುದರಿಂದಲೋ ಮತ್ತೇನೂ ಮುಂದುವರಿಸದೆ ಅಲ್ಲಿಗೇ ಸುಮ್ಮನಾಗಿ ಬಿಟ್ಟರು.

ಹಾಗೆಹೀಗೆ ಕೆಲವು ದಿನಗಳುರುಳಿದುವು. ಮತ್ತೊಂದುದಿನ ರಾತ್ರಿ ಅವರು ನನ್ನ ಕಿವಿಯ ಬಳಿಯಲ್ಲಿ ಬಾಯಿತೆರೆದರು:—"ಏನೇ? ಆ ದಿನ ನಾನು ಹೇಳಿದ್ದು? ಏನು ನಿಶ್ಚಯ ಮಾಡಿಕೊಂಡಿ? ನಾನು ನಾಳೆಯೇ ಹೊರಟುಹೋಗಬೇಕೆಂದಿದ್ದೇನೆ" ಎಂದು ನನ್ನೆದೆಗೆ ಗುಂಡು ಹಾಕಿದರು.

"ನಾಳೆಯೇ? ಬೇಡ ಬೇಡ! ಈ ಆಲೋಚನೆಯೇ ಬೇಡ. ಇಲ್ಲಿ ನಿಮಗೇನು ಕಷ್ಟವಿದೆ? ಸುಮ್ಮನೆ ಸುಖವಾಗಿ ಇಲ್ಲಿಯೇ ಇರೀ ಅಂದರೆ?"—ನಾನಂದೆ.

"ಅದೆಲ್ಲ ಕತೆ ನಾನು ಕೇಳ್ಲಿಲ್ಲ. ನೀನೀಗ ಬರುತ್ತಿಯೋ ಇಲ್ಲವೋ ಹೇಳಿಬಿಡು! ಮತ್ತೆ ನಿನ್ನನ್ನು ಬಿಟ್ಟು ನಾನು ಹೋದೇಂತ ದೂರಬೇಡ ನನ್ನನ್ನು!"

ನಾನು ಸ್ವಲ್ಪ ಹೊತ್ತು ತಳ್ಳಂಕದಲ್ಲಿ ಬಿದ್ದು— "ಅಪ್ಪ-ಅಮ್ಮನ ಹತ್ತಿರ ಕೇಳಿ ನೋಡುತ್ತೇನೆ........"

"ಅದೆಲ್ಲ ನಡೆಯದು. ಅವರು ಎಷ್ಟುಮಾತ್ರಕ್ಕೂ ನಿನ್ನನ್ನು ನನ್ನ ಜತೆಯಲ್ಲಿ ಕಳುಹಿಸಲಿಕ್ಕೇ ಇಲ್ಲ!"

ನಿಜವೇ! ತಂದೆ ನನ್ನನ್ನು ಎಷ್ಟುಮಾತ್ರಕ್ಕೂ ಅವರೊಂದಿಗೆ ಕಳುಹಿಸಿ ಕೊಡಲಾರರು. ಅವರ ಕಟ್ಟಕ್ಕರೆಯ ಮಗಳು ನಾನು. ನನಗೆ ಸ್ವತಂತ್ರ ಜೀವನವನ್ನು ನಡಿಸುವಂತಹ ಯೋಗ್ಯತೆಯನ್ನಿಷ್ಟು ಕೊಡಿಸಿ, ಅಳಿಯನನ್ನೂ ಮನೆಯಲ್ಲಿಯೇ ಇಟ್ಟುಕೊಂಡು, ನಮ್ಮ ಸುಖವನ್ನು ಕಣ್ತುಂಬಾ ನೋಡಿ ಕೊಂಡಿರಬೇಕಂಬುದೇ ಅವರ ಇಷ್ಟ. ಒಂದು ವೇಳೆ ಗಂಡನೊಂದಿಗೆ ಹೋಗಿಯೇತೀರುವೆನೆಂದು ನಾನು ಹಟಹಿಡಿದರೂ, ನನ್ನ ವಿದ್ಯೆಯನ್ನು ಅರ್ಧದಲ್ಲಿ ನಿಲ್ಲಿಸಿಕೊಂಡು ಹೋಗಲು ಅವರೆಂದಿಗೂ ಸಮ್ಮತಿಪಡರು ನಮ್ಮ ವಿದ್ಯೆಗಾಗಿ ಅವರೆಷ್ಟು ಕ್ಲೇಶಪಟ್ಟಿದ್ದಾರೆ! ಊರಲ್ಲಿಯ ಆಧಾರವನ್ನು ಕಿತ್ತು ಕೊಂಡು, ತಮ್ಮೊಬ್ಬರ ರಟ್ಟೆಯನೆರವನ್ನೇ ನಂಬಿ, ಈ ಮದರಾಸಿಗೆ ಬಂದು ಬಹಳ ಕಷ್ಟಪಟ್ಟವರು ಮೊದಲು. ಆ ಮೇಲೆ ಒಂದು ಸಣ್ಣ ಹೋಟೆಲನ್ನಿಟ್ಟು ಕೊಂಡು, ಅದರಮೇಲೊಂದೈನೂರು ರೂಪಾಯಿ ಸಾಲವನ್ನು ಮಾಡಿ, ಸ್ವಯಂ ಕೆಲಸವನ್ನು ಮಾಡುತ್ತ ಹೋಟೆಲನ್ನು ತುಸು ಅಭಿವೃದ್ಧಿಗೂ ತಂದಿದ್ದರು. ಆದರೆ ಸಂಸಾರದ ಖರ್ಚುತಾಪತ್ರಯಗಳು ಹೆಚ್ಚಾಗುತ್ತ ಬಂದುದರಿಂದ ಆ ಸಾಲ ಮಾತ್ರ ಇನ್ನೂ ತೀರಿರಲಿಲ್ಲ. ಮೋಸ-ಮಾಯೆ-ಮಾಟಗಳನ್ನು ಮಾಡದವರಾದುದರಿಂದ ಲಾಭವು ಕಡಮೆಯೇ; ಕಷ್ಟ-ನಷ್ಟ-ಕರ್ಚುಗಳೇ ಹೆಚ್ಚು. ಇದರೆಡೆಯಲ್ಲಿ ನನ್ನ ವಿದ್ಯೆಗೆ ಕೂಡಾ ಬೇರೆ ಸ್ವಲ್ಪ ಸಾಲ ಮಾಡಿದ್ದಾರಂತೆ ಇಷ್ಟೆಲ್ಲ ತಂದೆಯ ಮಮತೆಯನ್ನು ಮರೆತು; ಗಂಡನೇ ಗತಿಯೆಂದು" ಪೂರ್ವಾಪರ ಯೋಚನೆಮಾಡದೆ ಓಡಿಬಿಡಬಹುದೆ? ಗಂಡನ ರೀತಿ-ನೀತಿಗಳಾದರೋ ಅದೇನೋ ನನ್ನ ಮನಸ್ಸಿನ ಒಳಭಾಗವನ್ನು ಅಳುಕಿಸುತ್ತಿದ್ದಿತು. ಇವರು ನನ್ನನ್ನು ಎಲ್ಲಿಗಾದರೂ ಕರೆದೊಯ್ದು ಮರ್ಯಾದೆಯಿಂದ ಬಾಳಗೊಡಿಸಿಯಾರೆ ?— ಎಂದೊಂದು ಸಂದೇಹದ ತಂತಿ ಮೊಂಟೆಕೊಂಡಿದ್ದಿತು. ಹಾಗಿದ್ದರೆ ನಾನು ಇಷ್ಟು ವರ್ಷ ಏಕೆ ಕಲಿಯಬೇಕಿತ್ತು ? ಅಪ್ಪನಿಗೆ ವ್ಯರ್ಥವಾಗಿ ಏಕೆ ಖರ್ಚುಮಾಡಿಸಬೇಕಿತ್ತು? ಫಸ್ಟ್‌ಫಾರಂ ಆದ ಕೂಡಲೇ ನಿಲ್ಲಿಸಿ ಬಿಡಬಹುದಿತ್ತಲ್ಲ? ಅಬ್ಬಾ! ಅದೊಂದು ದಿನ ಇವರೊಡನೆ

ಸಿನೆಮಕ್ಕೆ ಹೋದುದೇ ಎಂತಹ ಭಯಂಕರ ರಾತ್ರಿಯಾಯಿತದು?........ ಬೇಡ ಬೇಡ! ತಂದೆ ತಾಯಿಗಳಿಗೆ ವಿರೋಧವಾಗಿ ನಾನಿವರೊಂದಿಗೆ ಹೋಗಲಾರೆ. "ಬೇಡ, ನೀವು ಖಂಡಿತವಾಗಿ ಎಲ್ಲಿಗೂ ಹೋಗುವ ಆಲೋಚನೆ ಮಾಡಬೇಡಿ. ಹಾಗೂ ನಿಮಗೆ ಇಲ್ಲಿ ಇರಲಿಕ್ಕೆ ಕಷ್ಟವಾದರೆ, ಬೇರೆ ಪ್ರತ್ಯೇಕ ಕೋಣೆ ಮಾಡಿಕೊಂಡಿರುವ. ಸುಮ್ಮನೆ ಅಲೆದಾಟಬೇಡ" ಎಂದು ನಾನು ಅವರಿಗೆ ಹೇಳಿದೆ.

"ಅಂದರೆ ನೀನು ಟ್ರೈನಿಂಗ ಪಾಸಾಗಿ ಟೀಚರ್ ಕೆಲಸ ನೋಡಿಕೊಂಡು ದೊಡ್ಡ ಆಫೀಸಿಗೆ ಹೋಗಿಬರುವಹಾಗೆ ಶಾಲೆಗೆ ಹೋಗಿ ಬರುತ್ತಾ ಇರುವುದು, ನಾನು ಹೊಟೆಲಲ್ಲಿ ಬಾಣಾಲೆಯ ಮುಂದೆ ಬೆವರುಸುರಿಸುತ್ತಾ ಥಾಣೇ ತಿಕ್ಕಿ ತಿಕ್ಕಿ ಒಣಗೋದು!" ಎಂದು ಭುಸುಭುಸಿದರು.

ಓಹೋ! ಇದೋ ಇವರ ಹೃದ್ಗತ! ಇನ್ನಷ್ಟು ಕಲ್ಲೋಲವೆದ್ದಿತು ನನ್ನ ಹೃದಯದಲ್ಲಿ. ಸ್ವಲ್ಪ ತಡೆದು ನಾನು— "ಹಾಗಾದರೆ ನೀವು ದೊಡ್ಡದೊಂದು ಉದ್ಯೋಗಕ್ಕೆ ಹೋಗುವಿರೇನು?" ಎಂದು ಕೇಳಿದೆ. ಈ ಪ್ರಶ್ನೆಯಲ್ಲಿ ನನ್ನ ಸಂತಾಪದ ಬಿಸಿಯೂ ಮೂಡಿರಬೇಕು.

"ಆಮಾತು ಬೇರೆ ನಾನೊಬ್ಬ ಕೀಳು ಕೆಲಸದವನೆಂತಲೇ ಇರಲಿ. ನನ್ನ ಹೆಂಡತಿ ಎಂಬುದನ್ನು ನಾನು ಸೈಸಲಿಕ್ಕಾಗದ!"

ಅಯ್ಯೊ! ಇದೆಂತಹ ಮೂರ್ಖತನ! ದೀನಭಾವದ ಒಂದು ಸಣ್ಣ ಮಾಸ್ತರಿಕೆಎಂದರೆ ಬಹಳಗೌರವವೆಂದು ಇವರುತಿಳಿದಿದ್ದಾರೇನೊ!— "ಹಾಗಾದರೆ ನಾನು ಕಲಿಯುವುದನ್ನು ಬಿಟ್ಟುಬಿಟ್ಟರೆ ಇಲ್ಲಿಯೇ ಇರಬಲ್ಲಿರಾ?"

ಇದೆಂಥಾ ಮಾತು? ಇಲ್ಲಿದ್ದರೆ ನೀನು ಅರ್ಧದಲ್ಲಿ ಹೇಗೆ ಕಲಿಯುವದನ್ನು ಬಿಡಬಲ್ಲಿ? ನನ್ನ ಕೋರಿಕೆ ಹೀಗೆಲ್ಲಾ ಉಂಟೆಂದು ಮಾವನಿಗೆ ತಿಳಿದರೆ ಮತ್ತಷ್ಟು ಅನರ್ಥವೇ. ಅದೆಲ್ಲ ಸಾಧ್ಯವಿಲ್ಲ. ಗಂಡ ಹೋದಲ್ಲಿ ನಾನೂ ಹೋಗುತ್ತೇನೆ ಎಂತ ಗಟ್ಟಿ ಧೈರ್ಯಮಾಡಿ ನನ್ನೊಟ್ಟಿಗೆ ಹೊರಟು ಬಿಡಬೇಕು ನೀನು. ನೋಡು, ಸೀತೆ ರಾಮನೊಡನೆ ಕಾಡಿಗೆ ಸಹಾ ಹೋಗಲಿಲ್ಲವೆ?

ಆಹಾ! ಎಂತಹಉದಾಹರಣೆ ಎತ್ತಿದರವರು? ಸೀತೆಯೆಲ್ಲಿ–ನಾನೆಲ್ಲಿ? ರಾಮನೆಲ್ಲಿ—ಇವರೆಲ್ಲಿ? ಏನಾದರೂ ನಾನೊಲ್ಲೆ. ಹೆತ್ತವರಿಗೆ ಸಿಟ್ಟಾಗುವಂತೆ ಹೋಗುವುದು ಒಳ್ಳೆಯದೇ ಅಲ್ಲ. ಅದು ನನ್ನಿಂದಾಗಲಿಕ್ಕೇ ಇಲ್ಲ" ಎಂದುಬಿಟ್ಟೆ.

" ಹಾಗಾದರೆ ನಿನ್ನ ಚಿಂತೆ ನಾನು ಬಿಡಬೇಕಾಯಿತು ! "

" ಅಯ್ಯೋ! ನನ್ನ ಗತಿ ? "

" ಸ್ತ್ರೀಗೆ ಪತಿಯೇ ಗತಿ! ಹೊರಡು ನನ್ನೊಂದಿಗೆ ! "

ಎಂತಹ ಉಭಯಸಂಕಟ!— " ನಾನು ಹೇಳುವುದು ಕೇಳಿ, ನಿಮಗೆ ಇಲ್ಲಿ ಹಿಡಿಯದಿದ್ದರೆ ನೀವು ಮಾತ್ರ ಹೋಗಿ, ನಿಮ್ಮ ಕೆಲಸಗಳನ್ನೆಲ್ಲ ಮಾಡಿ ಕೊಂಡು, ಆ ಮೇಲೆ ಬಂದು ನನ್ನನ್ನು ಕರಕೊಂಡು ಹೋಗಿ. ನಾನು ಟೀಚರಿಕೆ ಮಾಡೋದೂ ಬಿಡೋದೂ ಆ ಮೇಲೆ ನೋಡುವ " ಎಂದಂದೆ.

" ಅಂತೂ ನೀನು ಪ್ರಕೃತ ಬರೋದಿಲ್ಲಾನ್ನು "

" ನಾನೇನು ಮಾಡಲಿ ಹೇಳಿ ? ನಾಳೆ ಬೇಕಾದರೆ ನಾನೊಮ್ಮೆ ಈ ವಿಷಯವನ್ನು ಮೆಲ್ಲನೆ ಅಮ್ಮನೊಡನೆ ಪ್ರಸ್ತಾಪಿಸಿ ನೋಡುತ್ತೇನೆ. "

" ಬೇಡವೇಬೇಡ ! "

" ನೀವು ಯಾವಾಗ ಹೊರಡುವಿರಿ ಹಾಗಾದರೆ ? "

" ಯಾವಾಗ ಹೊರಟರೆ ಇನ್ನು ನಿನಗೇನು ? "

" ಸಿಟ್ಟೆ ನನ್ನ ಮೇಲೆ ? "

" ಸಿಟ್ಟು ಅಂತ ಗೊತ್ತಿದ್ದರೂ ಸಿಟ್ಟೇಅಂತ ಕೇಳಿದರೆ ? " ಮತ್ತೆ ನಾನು ಮಾತೇ ಆಡಲಿಲ್ಲ. ಬಲುಹೊತ್ತಿನ ವರೆಗೆ ನನಗೆ ನಿದ್ರೆಯೂ ಬರಲಿಲ್ಲ. ದುಃಖಮಾತ್ರ ಉಕ್ಕಿ ಉಕ್ಕಿ ಬರುತ್ತಿತು. ನಿದ್ರೆ ಹಿಡಿದಾಗ ಮಧ್ಯರಾತ್ರಿ ಮೀರಿಹೋಗಿತ್ತೋ ಏನೊ ! "

೫

ಮರುದಿನ ಬೆಳಿಗ್ಗೆ ನಾನು ಏಳುವಾಗ ಅವರು ಹಾಸಿಗೆಯಲ್ಲಿರಲೇ ಇಲ್ಲ! ಸಾಧಾರಣವಾಗಿ ಅವರು ಅಷ್ಟುಬೇಗ ಎದ್ದು ಹೋಗುವವರಲ್ಲ. ತಂದೆಯು ವರು ಎಂದಿನಂತೆ ಬೆಳಂಜಾವದಲ್ಲೆ ಎದ್ದು ಹೋಟೆಲಿಗೆ ಹೋಗಿಬಿಟ್ಟದ್ದರು. ಇನ್ನೂ ಸ್ವಲ್ಪ ಹೊತ್ತಿನಮೇಲೆ ನನ್ನ ಗಂಡನೂ ಎದ್ದು ಪ್ರಾತಃಕೃತ್ಯಗಳನ್ನು ತೀರಿಸಿಕೊಂಡು ಹೋಗಿ ಅವರನ್ನು ಕೂಡುವುದು ಕ್ರಮ........ ರಾತ್ರಿಯ ಸಂಭಾಷಣೆಗಳು ನನ್ನ ನೆನಪಿಗೆ ಮಿಂಚಿದುವು. ಹಾ! ಹೇಳದೆ ಹೊರಟೇ ಹೋಗಿರಬಹುದೆ ? ಇರಲಾರದು. ಬಹುಶಃ ಬೇಗನೇ ಎದ್ದು ಹೊಟೇಲಿಗೇ ಹೋಗಿರಬೇಕು, ಎಂದು ಧೈರ್ಯವನ್ನು ತಾಳಲೆತ್ನಿಸಿತು ನನ್ನ ಮನಸ್ಸು. ಸ್ವಲ್ಪ ಹೊತ್ತಿನಮೇಲೆ ವಾಡಿಕೆಗೆ ವಿರುದ್ಧವಾಗಿ ನನ್ನ ತಂದೆಯವರು ಮನೆಗೆ

ಬಂದರು. ವಾಡಿಕೆಗೆ ವಿರೋಧವಾಗಿಯೇ ಒಂದು ಟಾವೆಲನ್ನು ಜನಿವಾರದ ಹಾಗೆ ಎದೆಯ ಮೇಲೆ ಹಾಕಿಕೊಂಡಿದ್ದರು. ಬಂದವರೇ "ನನ್ನ ಜನಿವಾರ ಚಾಪೆಯಲ್ಲೇ ಕಳಚಿ ಬಿದ್ದದೇಂತ ಕಾಣುತ್ತದೆ. ಗಿರಿಜಾ, ನನ್ನ ಹಾಸಿಗೆ ಇತ್ತ ತಾರೇ" ಎಂದರು. ನಾನು ಅವರ ಹಾಸಿಗೆಯನ್ನು ಎತ್ತಿತಂದು ಬಿಡಿಸಿದೆ. ತಂದೆ ಅದರಲ್ಲಿದ್ದೊಂದು ವಸ್ತ್ರವನ್ನು ಒದರಿ ಬಿಡಿಸುವಾಗ, ತುಂಡಾಗಿ ಹೋದ ಅವರ ಜನಿವಾರ ಹೊರಟಿತು. "ಎಲ! ಇದೇನು ಹೊಸಾ ಜನಿವಾರ ಕತ್ತರಿಸಿದ ಹಾಗೆ ತುಂಡಾಗಿದೆಯಲ್ಲ! ಹೊ! ಇದರಲ್ಲಿದ್ದ ಬೀಗದ ಕೈ ಎಲ್ಲಿ? ಗಿರಿಜಾ! ನೋಡು ನೋಡು! ನನ್ನ ಟ್ರಂಕು ನೋಡು!" ಎಂದು ತಂದೆಯವರು ಒಂದೇ ಗಾಬರಿಯಿಂದ, ನಡುಗೋಣೆಯಲ್ಲಿದ್ದ ಅವರ ಟ್ರಂಕು ಪೆಟ್ಟಿಗೆಯ ಬಳಿಗೆ ಹೋದರು. ಟ್ರಂಕು ಪೆಟ್ಟಿಗೆ ಮುಚ್ಚಿಕೊಂಡೇ ಇತ್ತು. ಬೀಗದ ಕೈ ಅದರ ಬೀಗದ ತೂತಿನಲ್ಲೇ ಇತ್ತು! "ಇದೇನಿದು? ನಾನು ನಿನ್ನೆ ಬೀಗವೇ ಹಾಕಿಲ್ಲವೆ? ಕೈಯನ್ನು ಹೀಗೆಯೇ ಬಿಟ್ಟು ಬಿಟ್ಟಿನೆ? ಇಲ್ಲವಲ್ಲ! ಬೀಗದ ಕೈ ನನ್ನ ಜನಿವಾರದಲ್ಲೇ ಇರುವಂಥಾದ್ದು. ಜನಿವಾರ ಕತ್ತರಿಸಿ........ ಅಯ್ಯೋ! ಕೊಂಪೆ ಮುಳುಗಿತು!" ಎಂದು ಕೂಗಿ ತಂದೆ ತಲೆಯ ಮೇಲೆ ಕೈಯಿಟ್ಟುಕೊಂಡು ಕುಳಿತು ಬಿಟ್ಟರು. "ಏನಾಯಿತಪ್ಪಾ?" ಎಂದು ನಾನೂ ಸರೋಜೆಯೂ ಗಾಬರಿಯಾಗಿ ಕೂಗಿದೆವು. ಅಡುಗೇ ಮನೆ ಯಿಂದ ತಾಯಿಯೂ ಓಡಿ ಬಂದು "ಏನಾಯಿತೆ"ಂದು ಕೇಳಿದಳು.

"ಕಳ್ಳ! ಕಳ್ಳ! ಮನೆಯೊಳಗೆ ಕಳ್ಳ ಹೊಕ್ಕಿದ್ದಾನೆ! ಎಂದು ಚೀರಿ ದರು ತಂದೆ. ಪಕ್ಕದ ಬಿಡಾರಿಗರೂ "ಏನಾಯಿತು?" ಎನ್ನುತ್ತಾ, ಬಾಗಿಲ ಹೊರಗೆ ಬಂದು ನಿಂತು ನೋಡುತ್ತಿದ್ದರು. "ಅಯ್ಯೋ ಭಗವಂತನೆ! ಸಾಲಕ್ಕೆ ಕೊಡಬೇಕೂಅಂತ, ನಾನು ನಿನ್ನೆ ಬ್ಯಾಂಕಿನಿಂದ ಐದುನೂರು ರೂಪಾಯಿಯನ್ನು ತಂದು ಈ ಪೆಟ್ಟಿಗೆಯಲ್ಲಿಟ್ಟದ್ದು! ನೂರು ರೂಪಾಯಿಯ ಐದು ನೋಟುಗಳು. ಅಷ್ಟೂ ಹೋಯಿತು!" ಎಂದು ತಂದೆಯವರು ಬಾಯಿಬಿಟ್ಟರು.

"ಅಯ್ಯೋ ದೇವರೆ! ಯಾವ ಕಳ್ಳ? ಹ್ಯಾಗೆ ಬಂದ?" ಎಂದು ನನ್ನ ತಾಯಿ ಬಾಯಿ ಬಡಿದುಕೊಂಡಳು.

"ನೋಡಿ ಶಾಮಯ್ಯಾ, ಚೆನ್ನಾಗಿ ನೋಡಿ. ಪೆಟ್ಟಿಗೆ ಅರೆಯಲ್ಲಿಯೋ ಅಡಿಯಲ್ಲಿಯೋ ಎಲ್ಲಿಯಾದರೂ ಇಟ್ಟಿರಬಹುದು." ಎಂದರು ಪಕ್ಕದ

ಕುಟುಂಬದವರೊಬ್ಬರು.

"ಇಟ್ಟದ್ದೆಲ್ಲಿಂತ ನನಗೆ ಚೆನ್ನಾಗಿ ನೆನಪುಂಟು. ಇನ್ನು ಹುಡುಕುವುದೇನಿದೆ ಮಣ್ಣು? ಕಳ್ಳ ನನ್ನ ಜನಿವಾರ ಕತ್ತರಿಸಿದಾಗಲೇ ಗೊತ್ತಾಗುತ್ತದಲ್ಲ?" ಎನ್ನುತ್ತಾ ಅಪ್ಪ ಪೆಟ್ಟಿಗೆಯಲ್ಲಿದ್ದ ಸಾಮಾನುಗಳನ್ನೆಲ್ಲಾ ಕೆಳಗೆ ಹಾಕ ತೊಡಗಿದರು. ಆಗ ಪೆಟ್ಟಿಗೆಯ ಅರೆಯಲ್ಲಿದ್ದೊಂದು ಪತ್ರವು ನನ್ನ ಕಾಲಬುಡಕ್ಕೆ ಬಂದು ಬಿತ್ತು. ಅದರಲ್ಲಿದ್ದ ಅಕ್ಷರಗಳು ಓರೆ-ಕೋರೆಯಾಗಿ ನನ್ನ ಗಂಡನ ಅಕ್ಷರದಂತೆಯೇ ಕಂಡುದನ್ನು ನೋಡಿ, ನಾನು ಅದನ್ನು ಕೈಗೆತ್ತಿಕೊಂಡು ನೋಡಿದೆ. ಹೌದು, ಅವರದೇ. ಏನೂ ಚಂದವಾಗಿಲ್ಲದ ಅಕ್ಷರಗಳು. ನನ್ನ ಗಂಡನ ಅಕ್ಷರಗಳನ್ನು ನಾನು ಹೀಯಾಳಿಸುವೆನೆಂದು ತಿಳಿದು ಬಿಡಬೇಡಿ. ಸತ್ಯಸಂಗತಿಗಳನ್ನೆ ಬರೆಯುವಾಗ ತಪ್ಪೊಪ್ಪುಗಳೆಲ್ಲವನ್ನೂ ಮರೆಮಾಜದೆ ಬರೆಯುತ್ತಿದ್ದೇನೆ. ಅವರ ಅಕ್ಷರಗಳನ್ನು ನೋಡಿದರೆ ಕಲಿಯುವುದರಲ್ಲಿ ಅವರಿಗಿರುವ ಅಶ್ರದ್ಧೆ ಚೆನ್ನಾಗಿ ವ್ಯಕ್ತವಾಗುತ್ತೆ. ಮತ್ತೂ ಅವರು ಪ್ರಾಥಮಿಕ ಮೂರನೇ ನಾಲ್ಕನೇ ತರಗತಿಯಾದರೂ ಪಾಸಾಗಿದ್ದರೋ ಇಲ್ಲವೋ ಸಂದೇಹವೆನಿಸುವದು.

ಈ ಪತ್ರದಲ್ಲೀಗ ರೆವಿನ್ಯೂ ಸ್ಟಾಂಪು ಬೇರೆ ಹಚ್ಚಲ್ಪಟ್ಟಿತ್ತು. ಅದರ ಮೇಲೆ "ವೆಂಕಟೇಶ್" ಎಂದಿತ್ತು ಅವರ ರುಜು. ಅದರ ಬುಡದಲ್ಲಿದ್ದುದು ನಿನ್ನೆಯದೇ ತಾರೀಖು. "ಕೆ. ಬಲರಾಂ ರೆಡ್ಡಿ," "ಬಿ. ಸುಂದರಂ ಮುದಲಿಯಾರ್" ಎಂಬಿಬ್ಬರು ಸಾಕ್ಷಿಗಳ ರುಜು ಬೇರೆ. ಹಾಗೆಯೇ ಕಣ್ಣೋಟವನ್ನೋಡಿಸಿ ಓದಿ ನೋಡಿದೆ. ಪ್ರೋ ನೋಟಿನ ಒಕ್ಕಣೆ. ನನ್ನ ತಂದೆಗೆ ಅವರು ಬರೆದುಕೊಟ್ಟ ರೂಪಾಯಿ ೫೦೦ರರ ಪ್ರೋ ನೋಟು! "ಅಪ್ಪಾ ನೀವು ನಿನ್ನೆ ಅವರಿಗೆ ಐನೂರು ರೂಪಾಯಿ ಕೊಟ್ಟಿದ್ದೀರಾ ನೋಟಿನ ಮೇಲೆ?" ಎಂದು ಕೇಳಿದೆ.

"ಏನು? ಯಾರಿಗೆ?" ತಂದೆಯ ಅರಳಿದ ಕಣ್ಣಿನಲ್ಲಿ ತಾನೇನೂ ಅರಿಯೆನಲ್ಲಾ ಎಂಬ ಭಾವವಿತ್ತು.

"ಅದೇ ಅವರಿಗೇ ನೋಡೀ ಅವರು ನಿಮಗೆ ಬರೆದುಕೊಟ್ಟ ಪ್ರೋ ನೋಟು"— ಎಂದು ನಾನು ನೋಟನ್ನು ಅವರ ಕೈಗೆ ಕೊಟ್ಟೆ.

"ಎಲ್ಲಿತ್ತಿದು?"

"ನಿಮ್ಮ ಟ್ರಂಕಿನಲ್ಲಿಯೇ. ನೀವೇ ಈಗ ಆ ಅರೆಯಿಂದ ಕೆಳಗೆ

ಹಾಕಿದಿರಿ ! ”

ನಾನು ಬೇಗ ಬೇಗನೇ ಅಪ್ಪನ ಅಂಗಿಯ ಕಿಸೆಯಿಂದ ಅವರ ಕಣ್ಣಡಕವನ್ನೆತ್ತಿಕೊಟ್ಟೆ. ಅವರು ಅದನ್ನು ಓದಿ ನೋಡಿ ಮೊದಲು ಬೆರಗಾದರು. ನಂತರ ಕೋಪದಿಂದ— “ಎಲ್ಲಿದ್ದಾನೆ ಅವ? ” ಎಂದು ಅತ್ತಿತ್ತ ನೋಡಿದರು.

“ ಯಾಕೆ ? ಅವರು ಹೋಟ್ಲಿಗೆ ಬರ್ಲಿಲ್ಲವೆ ?—” ನಾನು ಕೇಳಿದೆ.

ಅವರು ! ಅವರು ! ಛೀ ! ನಿನ್ನ ಅವರು ಹಾಳಾಗಾ ! ಎಲ್ಲಿದ್ದಾನೆ ಕಳ್ಳ ? ”— ತಂದೆಯವರು ಕೋಪದಿಂದ ಗರ್ಜಿಸುತ್ತ ಆ ನೋಟು ಕಾಗದವನ್ನು ನೆಲಕ್ಕೆ ಅಪ್ಪಳಿಸಿದರು.

“ ಪಕ್ಕಾ ಕಳ್ಳ ! ಭಲೆ ! ಎಂಥ ಕಳ್ಳನಿಗೂ ತೋರದಂಥ ಉಪಾಯ ! ಹಗಲುಕಳ್ಳ ! ಪೋಲೀಸ್ ಕಂಪ್ಲೇಂಟ್ ಕೊಡ್ತೇನೆ ! ಇಂಥಾ ಪೋಲೀಗಾರನಿಗೆ ನನ್ನ ಬಂಗಾರದ ಗೊಂಬೆಯಂಥ ಮಗಳನ್ನು ಕೊಟ್ಟು ಮೋಸಹೋದೆನಲ್ಲಾ !— ಎಂದು ಹಲುಬಿದರು ನನ್ನ ತಂದೆ. ಬಳಿಕ “ ಏನೇ ಗಿರಿಜಾ ! ನಿನ್ನ ಹತ್ತಿರ ಏನೂ ಹೇಳಲಿಲ್ಲವೇ ಆ ಘಟಿಂಗ ? ಎಷ್ಟು ಹೊತ್ತಿಗೆ ಎದ್ದ ? ಎಷ್ಟು ಹೊತ್ತಿಗೆ ಕದ್ದ ? ಎಷ್ಟು ಹೊತ್ತಿಗ ಓಡಿದ ? ಈ ಕಳ್ಳ ನೋಟಿಗೆ ಸಾಕ್ಷೀ ಹಾಕಿದ ಆ ಬಲರಾಮರೆಡ್ಡಿಯೂ, ಸುಂದರಂ ಮುದಲಿಯೊ ಅವನ ಮೋಸಕ್ಕೆ ಒಳಪಟ್ಟ ಕೇಡಿಗಳೂಂತಾಯಿತು. ಆ ಅಯೋಗ್ಯರು ಯಾವಾಗಲೂ ನಮ್ಮ ಹೊಟ್ಲಿಗೆ ಬರುತ್ತಾ ಇರುವವರೇ ! ”

“ ಅಲ್ಲ ಶ್ಯಾಮಯ್ಯಾ, ನೀವು ಬ್ಯಾಂಕಿನಿಂದ ರೂಪಾಯಿ ತಂದದ್ದೂ ಈ ಪೆಟ್ಟಿಗೆಯಲ್ಲಿಟ್ಟದ್ದೂ ಎಲ್ಲಾ ಅವನು ನೋಡಿದ್ದನೇನು ?— ” ಎಂದು ಪಕ್ಕದ ಬಿಡಾರದವರೊಂದು ವ್ಯರ್ಥ ಪ್ರಶ್ನೆ ಹಾಕಿದರು.

ಗೊತ್ತಾಗದೇನು ಮನೆಯೊಳಗೇ ಇರುವ ಆಸಾಮಿಗೆ? ನಮ್ಮ ಹೋಟೆಲಿನ ಬಾಬ್ತು ಬಹಳ ವರ್ಷದಿಂದ ಸ್ವಲ್ಪ ಸಾಲವಿತ್ತು. ಅದನ್ನು ಕೊಟ್ಟು ತೀರಿಸಿಬಿಡುವ ಸಂದರ್ಭ ಒದಗಿ ಬಂದದ್ದರಿಂದ ಈ ವಿಷಯವನ್ನು ಮೊನ್ನೆ ಅವನ ಮುಂದೆಯೇ ನಾನು ಮಾತಾಡಿಕೊಂಡೆ. ನಿನ್ನೆ ನಾನು ಬ್ಯಾಂಕಿನಿಂದ ಹಣತೆಗೆದು ತಂದದ್ದೂ ಅವನಿಗೆ ಗೊತ್ತು. ಈ ಪೆಟ್ಟಿಗೆಯಲ್ಲಿಡುವೆನೆಂಬುದನ್ನೂ ಬಲ್ಲ. ಥೇಟು ಕಳ್ಳ ! ಎಷ್ಟು ದಿನದಿಂದ ಈ ದಿವ್ಯ ಸಂದರ್ಭಕ್ಕೆ ಹೊಂಚುಹಾಕುತ್ತಿದ್ದನೋ ” ಎಂದರು ತಂದೆ.

“ ರಾತ್ರಿ ಅವನು ಎದ್ದದ್ದಾಗಲೀ, ಪೆಟ್ಟಿಗೆ ತೆರೆದ ಸದ್ದಾಗಲೀ ಒಂದೂ

ಕೇಳಿಸದಹಾಗೆ ಕೆಲಸ ಕಾಣಿಸಿ ಬಿಟ್ಟನಲ್ಲ!" ಎಂದು ಅಚ್ಚರಿವಟ್ಟಳು ನನ್ನ ತಾಯಿ.

"ಕೈಗಂಡ ಕಳ್ಳ! ಜೈಲಿಗೇ ಕಳಿಸಬೇಕು! ಇನ್ನು ಅಳಿಯಅಂತ ನೋಡುವೆನೇ?"

ಅಪ್ಪನ ಸಿಡುನುಡಿಗೆ ಉತ್ತರವಾಗಿ ಪಕ್ಕದ ಬೀಡಾರದ ಅಯ್ಯರೆಂದರು. "ದುಡುಕಿಬಿಡಬೇಡಿ ಶಾಮಯ್ಯಾ. ಆ ನೋಟಿನಲ್ಲಿ ಸಾಕ್ಷೀ ಹಾಕಿದ್ದಾರಲ್ಲಾ ಅವರನೊಂದು ವಿಚಾರಿಸಿ ನೋಡಿ."

ಅದರಲ್ಲಿ ಸಾಕ್ಷಿ ಹಾಕಿದವರಿಬ್ಬರೂ ಅಲ್ಲಿ ಸಮೀಪವೇ ಇರುವವರಂತೆ. ಅಪ್ಪನಿಗೂ ಅವರ ಗುರುತಿದ್ದಿತಂತೆ. ಅವರು ದಿನಾ ಎರಡು ಬಾರಿ ಅಪ್ಪನ ಹೊಟೆಲಿಗೇ ಬರುವರಂತೆ ಅವರನ್ನು ಕೇಳಿ ನೋಡುವೆನೆಂದು ತಂದೆಯವರು ಮನೆಯಿಂದ ತೆರಳಿದರು.

ಅವರು ಮಧ್ಯಾಹ್ನ ಮನೆಗೆ ಹಿಂದಿರುಗಿ ಬರುವಾಗ ಇನ್ನೊಂದು ದಾರುಣ ಪ್ರಸಂಗವು ಕಾದಿತ್ತು. ಇದರಿಂದಾಗಿ ನಾನು ಶಾಲೆಗೂ ಹೋಗದೆ ಮನೆಯಲ್ಲೇ ದುಃಖಿಸುತ್ತಾ ಕುಳಿತಿದ್ದೆ. ಏನು ಹೇಳಲಿ? ನಾನು ಶಾಲೆಗೆಂದು ಹೊರಡುವ ಹೊತ್ತಿನಲ್ಲಿ, ಸರೋಜ ನನ್ನ ಕೊರಳನ್ನು ನೋಡಿ, "ಅಕ್ಕ, ನಿನ್ನ ಬೋರಿ ಸರ ಎಲ್ಲಿಯೇ?" ಎಂದು ಕೇಳಿದಳು. ನಾನು ಮೆಟ್ಟಿಬಿದ್ದು ನೋಡುತ್ತೇನೆ, ಕುತ್ತಿಗೆಯಲ್ಲಿ ಸರವಿರಲಿಲ್ಲ. ಓ ಅಮ್ಮ! ಅಕ್ಕನ ಬೋರೀಸರ ಕೂಡಾ ಬಾವ ಕದ್ದುಕೊಂಡು ಹೋದರು!" ಎಂದು ಸರೋಜ ಕೂಗಿದಳು.

ಹೌದೇನೇ ಗಿರಿಜಾ! ಅಯ್ಯೋ ದೇವರೇ!–" ಎಂದು ಕೂಗುತ್ತ ತಾಯಿಯೂ ಓಡಿಬಂದು ನೋಡಿ ಬೆಪ್ಪಾಗಿ ನಿಂತು ಬಿಟ್ಟಳು. ನಾನೂಬೆಪ್ಪು!

ಹಾಗಿರುವಾಗಲೇ ತಂದೆಯು ಬಾಡಿದ ಮುಖದಿಂದ ಬಂದು ಉಬ್ಬಸ ಬಿಡುತ್ತ ಹೀಗೆಂದರುಃ— "ಆ ಸುಂದರಂ ಮುದಲೀ ಒಳ್ಳೇ ಮರ್ಯಾದೀಲಿ ದಭಾಯಿಸ್ತಾನೆ ನನ್ನನ್ನು! ಅವರಿಬ್ಬರ ಇದಿರಿನಲ್ಲಿಯೇ ನಾನು ಐನೂರು ರೂಪಾಯಿಯನ್ನು ಕೊಟ್ಟೆನಂತೆ ಅವನಿಗೆ! ಹೋಟೆಲಿನ ಕೋಣೆಯಲ್ಲಿಯೇ ಅಂತೆ ಕೊಟ್ಟದ್ದು! ಎಂಥಾ ಹಸಿಹಸೀಸುಳ್ಳು! ಚೆನ್ನಾಗಿ ಕೊಟ್ಟಿದ್ದಾನೆ ಲಂಚ!........ ಏನು ಮಾಡೋದು? ಪೋಲೀಸಿಗೇ ತಿಳಿಸಿ ಬಿಡುತ್ತೇನೆ............"

" ಏನು ಮಾಡುವುದೋ ! ನಮ್ಮ ಅಳಿಯರಾಯನ ಪ್ರತಾಪ ಇಷ್ಟೇ ಅಂತ ತಿಳಿದೀರಾ ? ಮಗಳ ಕುತ್ತಿಗೇನನೋಡಿ ! ಬೋರೀ ಸರವನ್ನು ಸಹಾ ಕದ್ದುಕೊಂಡು ಓಡಿದ್ದಾನೆ ! " ತಾಯಿಯಂದಳು.

" ಹೌದೇನೆ ?– " ಎಂದು ನನ್ನ ಮುಖ ನೋಡಿದರು ತಂದೆ. ನಾನು ತಲೆತಗ್ಗಿಸಿದೆ

" ಹ್ಯಾಗೆ ತೆಗೆದಾ ? ನಿನಗೆಗೊತ್ತೇ ಇಲ್ಲವೆ ? " ತಂದೆ ಮತ್ತೂ ಕೇಳಿದರು.

" ಇಲ್ಲಪ್ಪಾ. ಈಗ ತಾನೇ ಕುತ್ತಿಗೇಲಿ ಸರಇಲ್ಲದ್ದು ಗೊತ್ತಾದ್ದು ! " ನಾನಂದೆ ತಗ್ಗಿದ ದನಿಯಿಂದ.

" ಸರಿ ! ಸರಿ ! ಇನ್ನೆಂಥ ಯೋಚನೆ ? ಇಂಥಾಪೋಕರಿಯನ್ನು ಸುಮ್ಮನೆ ಬಿಡುತ್ತಾರೆಯೆ ? ಇಂಥವನು ನನ್ನ ಅಳಿಯನೇ ಅಲ್ಲ ! ಗಿರಿಜ ಸಂನ್ಯಾಸಿನಿಯಾಗಿದ್ರೂ ಚಿಂತಿಲ್ಲ ! ಅಥವಾ ಬೇರೆ ಮದುವೇ ಮಾಡಿಕೊಡ್ತೇನೆ. ಎಷ್ಟೋ ಕಡೆಯಲ್ಲಿ ಹೀಗಾಗಿದೆ ! ಈ ಕಾಲದಲ್ಲಿ ಎಂಥೆಂಥ ವಿಚಿತ್ರ ಮದುವೆಗಳೆಲ್ಲಾ ಆಗುತ್ತವಂತೆ !........ ಎಲ್ಲಿಗೆ ಓಡಿದ್ದಾನು ? ಎಂಥೆಂಥ ಕಳ್ಳರನ್ನೆಲ್ಲ ಹಿಡಿದು ಹಾಕಿದ ಪೋಲೀಸರಿಗೆ ಈ ಹೋಟೆಲ್ ಮಾಣಿಯನ್ನು ಹಿಡಿಯೋದೊಂದು ಕಷ್ಟವೇ ?........ "

ತಂದೆ ಪೋಲೀಸಿಗೆ ತಿಳಿಸಿಯೇ ಬಿಟ್ಟರು. ಪೋಲೀಸ್ ಇನ್ಸ್‌ಪೆಕ್ಟರೊಬ್ಬರು ನಮ್ಮಲ್ಲಿಗೆ ಬಂದು ವಿಚಾರ ನಡೆಸಿದರು. ಅವರು ಕೇಳಿದ ಪ್ರಶ್ನೆಗಳಿಗೆ ನಾನೂ ಉತ್ತರ ಹೇಳಬೇಕಾಯಿತು. ಹೇಳಿದೆ. ವೆಂಕಟೇಶರ ರೂಪು, ಆಕಾರ, ಚಹರೆ, ಉದ್ಯೋಗ, ವಯಸ್ಸು ಮುಂತಾದ್ದನ್ನೆಲ್ಲಾ ಬರೆದುಕೊಂಡು ಅವರು ಹೋದರು. ಇದೆಲ್ಲಾ ನನಗೆ ತುಂಬ ಸಂಕಟವನ್ನುಂಟು ಮಾಡಿತು. ಈ ದುರ್ಬುದ್ಧಿ ಅವರಿಗೇಕೆ ಹುಟ್ಟಿತೊ ! ಎಲ್ಲಿಯಾದರೂ ಅವರು ಪೋಲೀಸಿಗೆ ಸಿಕ್ಕಿಬೀಳಬಹುದೆ ! ಆ ಮೇಲೆ ಅವರ ವಿಚಾರಣೆಯಾಗುವಾಗ ನಾನು ಕೋರ್ಟಿಗೆ ಹೋಗ ಬೇಕಾದೀತು. ಅಲ್ಲಿ ಏಂಥೆಂಥಹ ಪ್ರಶ್ನೆಗಳಿಗೆಲ್ಲ ಉತ್ತರ ಕೊಡಬೇಕಾಗುವುದೋ ? ಅವರಿಗೆ ಶಿಕ್ಷೆಯಾದೀತೆ ? ಇದನ್ನು ಕುರಿತು ತಂದೆಯೂ ತಾಯಿಯೂ ಎಷ್ಟೋ ಚರ್ಚಿಸಿಕೊಂಡರು. ಆಕಸ್ಮಾತ್ತಾಗಿ ಸಿಕ್ಕಿಬಿದ್ದರೆ ತಪ್ಪಿಸಿಕೊಳ್ಳಲಿಕ್ಕಾಗಿಯೇ ಆ ನೋಟುಬರೆದಿಟ್ಟಿದ್ದಾರೆ. ಅದರಲ್ಲಿರುವಇಬ್ಬರು ಸಾಕ್ಷಿಗಳೂ ಅವರ ಪಕ್ಷದವರೇ ಆದುದರಿಂದ

ಆ ಹಣವನ್ನು ಅವರು ನೋಟಿನಮೇಲೆ ಪಡೆದುದೆಂದೇ ಸಿದ್ಧವಾದೀತು. ಇದು ತಂದೆಯ ಮೇಲೆಯೇ ತಪ್ಪು ತಿರುಗಿದರೂ ತಿರುಗುವಂಥಾದ್ದು. ಇನ್ನಾ ಬೋರೀಸರ; ಅದು ನಮ್ಮೂರಿನಲ್ಲಿ ನನ್ನ ತಂದೆಗೆ ಅವರ ಅತ್ತನು ಕೊಟ್ಟದ್ದಂತೆ. ಆದರಲ್ಲಿ ತಂದೆ ತಮ್ಮ ಹೆಸರನ್ನು ಕೆತ್ತಿಸಿದ್ದರು. ಅದು ವೆಂಕಟೇಶರ ಕೈಯಲ್ಲಿ ಸಿಕ್ಕಿದರೆ ಅವರಿಗೆ ಶಿಕ್ಷೆಯಾದೀತು. ನನ್ನ ಪತಿಗೆ ಶಿಕ್ಷೆಯಾದರೆ ನನಗೆ ಸಂತೋಷವೆ ? ನನಗೇ ತಿಳಿಯುವುದಿಲ್ಲವಿದು !........ ಪೋಲೀಸಿಗೆ ತಿಳಿಸಿಯಾದ ಮೇಲೆ ಇನ್ನೇನುತಾನೇ ಮಾಡಲು ಸಾಧ್ಯ ವುಂಟು ? ಅವರಿಗೆ ಕೆಡುಕಾಗಬಾರದೆಂದಿರುತ್ತಿದ್ದರೆ, ಬೋರೀಸರವನ್ನು ನಾನೇ ಅವರಿಗೆ ಕೊಟ್ಟೆನೆಂದು ಮೊದಲೇ ಹೇಳಬೇಕಿತ್ತು. ಅಷ್ಟು ಕ್ಷಮ ತಾಭಾವವು ನನಗೆ ಬರಲೇ ಇಲ್ಲ. ಹೌದು ! ಮತ್ತೆ ಅವರು ನನ್ನನ್ನು ಹಾಗೂ ಮೋಸ ಪಡಿಸಬಹುದೆ ? ಗಂಡನು ಹೇಗೆ ಮಾಡಿದರೂ, ಎಂತಹ ಘಾತವನ್ನೆಸಗಿದರೂ ಸಹಿಸಿಕೊಂಡು ಅವನಿಗೆ ಒಳ್ಳೆಯದನ್ನೆ ಬಯಸುವ ಅಪೂರ್ವ ಪ್ರತಿವ್ರತೆಯಾದ ಹೆಂಗುಸೇ ನಾನು ? ಸಾಮಾನ್ಯ ಎಲ್ಲ ಹೆಂಗು ಸರಿಗಿರುವ ದುಃಖ-ಕೋಪ-ಸಂತಾಪ-ಅಸೂಯೆ-ಸುಖಲಾಲಸೆ ಮೊದಲಾದ ಎಲ್ಲ ಭಾವವಿಕಾರಗಳು ನನಗೂ ಉಂಟು. ಅನಾಥರಾಗಿ ಬಂದು, ನಮ್ಮ ಆಶ್ರಯದಲ್ಲಿದ್ದು, ನನ್ನನ್ನೆ ವರಿಸಿಕೊಂಡು, ನಾನು ಅವರ ಮೇಲೆ ಅಷ್ಟು ಪ್ರೇಮ-ವಿಶ್ವಾಸಗಳನ್ನಿಟ್ಟಿರುವಾಗ, ಅನ್ಯಾಯವಾಗಿ ನನ್ನ ತಂದೆಯ ಹಣ ವನ್ನು ಕದ್ದು, ಮೇಲಾಗಿ, ನಾನು ನಿದ್ರೆಯಲ್ಲಿ ಮೈ ಮರೆತಿದ್ದಾಗ ನನ್ನ ಕೊರಳಿನ ಸರವನ್ನೂ ಜಾರಿಸಿಕೊಂಡು ಹೇಡಿ ತನದಿಂದ ಓಡಿ ಹೋದವರು ಗಂಡನೇ ಆದರೇನು ? ಅವರ ಮೇಲೆ ತೀರ ಜಿಗುಪ್ಸೆಯೂ, ತುಂಬಸಿಟ್ಟೂ ಹುಟ್ಟಿಬಿಟ್ಟಿತು ನನಗೆ. ಆ ಸರವು ನನ್ನ ತಂದೆಯ ಸೊತ್ತು, ಹಿರಿಯರ ಕುರುಹು, ಅವರ ಪ್ರೀತಿಯ ಗುರುತು, ನಾನು ಗೌರವಿಸತಕ್ಕ ಒಂದು ಲಾಂಛನ ಅದನ್ನೆ ಅವರು ಪೋಲೀ ಮಾಡುವುದು ಎಂಥ ಹೀನಾಯ ! ಇದರ ಸೂಚನೆ ನನಗೆ ಚೂರಾದರೂ ಮೊದಲು ಗೊತ್ತಾಗಿರುತ್ತಿದ್ದರೆ, ಆ ಸರವನ್ನು ನಾನು ನನ್ನ ಪ್ರೀತಿಯ ತಂಗಿ ಸರೋಜೆಯ ಕೊರಳಿನಲ್ಲಿ ಹಾಕಿ ಬಿಡುತ್ತಿದ್ದೆ. ಇಂತಹ ಕಳ್ಳ ಗಂಡನಿಗೆ ಜೈಲಾದರೇನಂತೆ ? ಆದರಿಂದ ನನಗೆ ಹೋಗುವ ಮೇಲಾದ ಗೌರವವೆಂತಹುದು ? ಹೇಗೂ ಒಬ್ಬ ಪೋಲೀ ಪುರುಷನ ಹೆಂಡತಿಯೆಂದು ಈಗಲೇ ಹಲವರಿಗೆ ಗೊತ್ತಾಗಿ ಹೋಯಿತು....

....ಆದರೆ ಅವರು ಸಿಕ್ಕಿ ಬಿದ್ದರೆ ? ಇಷ್ಟರಲ್ಲಿ ಅವರು ಯಾವ ಊರಿಗೆ ಓಡಿ ಹೋಗಿದ್ದಾರೋ ಏನೋ........

೬

ಮುಂದೆ ಎರಡು ವಾರಗಳ ಮೇಲೆ ನಮಗೆಲ್ಲರಿಗೂ ಆಶ್ಚರ್ಯವಾಗು ವಂತೆ, ತಂದೆಗೊಂದು ಕಾರ್ಡು ಬಂತು. ಅದನ್ನೋದಿ ತಂದೆ ಸಿಟ್ಟಿನಿಂದ ಸಿಡಿದು— "ಎಂಥಾ ಹಗಲುಗಳ್ಳ ನೋಡಿದಿಯಾ ಅವನು ? ಇದೇ ಮದರಾಸಿ ನಲ್ಲಿಯೇ ಇದ್ದಾನೆ. ನಾವು ಪೋಲೀಸಿಗೆ ತಿಳಿಸಿದ್ದಿಲ್ಲ ಅವನಿಗೆ ಗೊತ್ತಾಗಿಯೇ ಈ ಕಾಗದ ಬರೆದದ್ದು ಒಳ್ಳೇ ಸಭ್ಯನ ಹಾಗೆ !" ಎಂದು ಕಾರ್ಡನ್ನು ನನ್ನ ಕಡೆಗೆಸೆದರು. ಅದರಲ್ಲಿ,— "ತೀ. ನ. ಮಾವಯ್ಯನವರಿಗೆ, ವೆಂಕಟೇಶನ ಸಾಷ್ಟಾಂಗ ನಮಸ್ಕಾರ ನಾನು ನಿಮ್ಮ ಮನೆಯಿಂದ ಹೊರಟು ಬಂದ ಮೇಲೆ ಕಾಗದ ಬರೆಯಲು ತಡವಾದುದಕ್ಕೆ ಕ್ಷಮಿಸಿರಿ. ಸದ್ಯ ನನಗೆ ಇಲ್ಲಿಯೇ ಒಂದು ಕೆಲಸ ಸಿಕ್ಕಿಬಿಟ್ಟಿತು. ನಾನು ನಿಮ್ಮಿಂದ ಸಾಲವಾಗಿ ಪಡೆದ ಐನೂರು ರೂಪಾಯಿಯ ಆಧಾರದಿಂದ ನಾನೂ ನನ್ನೊಬ್ಬ ಗೆಳೆಯನೂ ಸೇರಿಕೊಂಡು ಒಂದು ವ್ಯಾಪಾರವನ್ನು ಆರಂಭಿಸಿದ್ದೇವೆ. ಸೌ. ಗಿರಿಜೆಯನ್ನು ಆದಷ್ಟು ಬೇಗದಲ್ಲಿ ಕರೆಯಿಸಿಕೊಳ್ಳಬೇಕೆಂದಿದ್ದೇನೆ. ಆ ಕುರಿತು ಇನ್ನೊಮ್ಮೆ ಬರೆಯು ವೆನು. ಇತಿ ಬೇಡುವ ಆಶೀರ್ವಾದ.

ಕೆ. ವೆಂಕಟೇಶ"

ಅದರಲ್ಲಿ ಅವರ ವಿಳಾಸವು "ನಂ. ೨೮ ತಂಗವೇಲು ಬೀದಿ, ಪುರುಷ ವಾಕಂ, ಮದರಾಸು" ಎಂದಿತ್ತು.

"ಇದೊಂದು ಮೋಸದ ಕಾಗದ. ಬೇಕಾದರೆ ಒಮ್ಮೆ ಹೋಗಿ ಎಷ್ಟು ಸುಳ್ಳು ಎಷ್ಟು ಸತ್ಯ ಎಂದು ಪರೀಕ್ಷೆ ಮಾಡಿಕೊಂಡು ಬಂದುಬಿಡುತ್ತೇನೆ." ಎಂದರು ನನ್ನ ತಂದೆ

ಮರುದಿನ ಮಧ್ಯಾಹ್ನದ ಮೇಲೆ ಅವರು ಪುರುಷವಾಕಂ ಕಡೆಗೆ ಹೊರ ಟರು. ಹೊರಟವರು ಹಿಂದಿರುಗಿ ಬರುವಾಗ ರಾತ್ರಿ ಹತ್ತು ಗಂಟೆಯಾಗಿ, ನಮಗೆಲ್ಲಾ ಯೋಚನೆ ಕೂಡ ಹಿಡಿದು ಬಿಟ್ಟಿತ್ತು. ಅವರು ನಿಟ್ಟುಸಿರುಬಿಟ್ಟು ಶ್ರಮಪರಿಹಾರ ಮಾಡಿಕೊಂಡ ಮೇಲೆ, ಹೋಗಿಬಂದ ಸಮಾಚಾರವನ್ನೆಲ್ಲ ವಿವರಿಸಿ ಹೇಳಿದರು.

"........ ಶುದ್ಧ ಮೋಸಗಾರನಾಗಿದ್ದಾನೆ ಅವನು. ನಾನು ಇಲ್ಲಿಂದ

ಅಲ್ಲಿಗೆ ಹೋಗಿ ೩೮ನೇ ನಂಬರಿನ ಆ ಮನೆಯನ್ನು ಮುಟ್ಟಿದೆ ಅದೊಂದು ಸಂದು ಬೀದಿಯಲ್ಲಿರುವ ಉಪ್ಪರಿಗೆಯ ಮನೆ ಕೆಳಗಡೆಯ ಕೋಣೆಗಳಲ್ಲಿ ಯಾರೋ ಕೆಲವು ಬಚ್ಚಾಲೀ ತರುಣರಂಥವರು ಬಾಡಿಗೆಗಿದ್ದರು. ಅವರ ಲ್ಲೊಬ್ಬ ಭುಸುಭುಸು ಸಿಗರೇಟಿನ ಹೊಗೆ ಉಗುಳುತ್ತ ಯಾರು—ಏನೆಂದು ನನ್ನನ್ನು ವಿಚಾರಮಾಡಿದ. 'ಹೌದು ಈ ಕೋಣೆಯುಂಟಲ್ಲಾ ಇದಕ್ಕೆ ಇತ್ತೀಚೆಗೆ ಯಾರೋ ಒಬ್ಬರು ಬಾಡಿಗೆಗೆ ಬಂದಿದ್ದಾರೆ. ಅವರು ರಾತ್ರಿಗಷ್ಟೇ ಇಲ್ಲಿಗೆ ಬರುವರು. ಉಪ್ಪರಿಗೇ ಮೇಲೆ ಹೋಗಿ ವಿಚಾರಿಸಿ. ಈ ಮನೆಯ ಯಜಮಾನಿ ಮೇಲಿದ್ದಾಳೆ.' ಎಂದು ಅವನು ಮಾಳಿಗೆಯ ಹಂತವನ್ನು ತೋರಿಸಿದ. ನಾನು ಮೇಲೆ ಹೋದೆ. ಅಲ್ಲೊಂದು ಭಾರಿಯ ಅಲಂಕಾರದ ಕೋಣೆಯೊಳಗೆ ಸುಮಾರು ನಲವತ್ತು ವಯಸ್ಸಿನ ಹೆಂಗುಸು ನನ್ನನ್ನು ಮಾತಾಡಿಸಿದಳು. 'ಹೌದು, ನೀವು ಹೇಳುವ ವೆಂಕಟೇಶ ಎಂಬವರು ಈಗೆಂಟುದಿನಗಳಿಂದ ಕೆಳಗಿನ ಕೋಣೆಯಲ್ಲಿ ಬಾಡಿಗೆಗಿದ್ದಾರೆ. ಯಾವುದೋ ಕಂಪೆನಿಯಲ್ಲಿ ಕೆಲಸವಂತೆ, ಬರುವಾಗ ರಾತ್ರಿಯಾಗುತ್ತದೆ; ಬೆಳಿಗ್ಗೆ ಎದ್ದ ಕೂಡಲೇ ಹೋಗಿಬಿಡುತ್ತಾರೆ. ನೀವು ಯಾರು? ಅವರಿಗೇನಾಗಬೇಕು?' ಎಂದು ಕೇಳಿದಳು.

'ನಾನು ಅವನ ಸಂಬಂಧಿಕ. ಅವನು ಯಾವ ಕಂಪೆನಿಯಲ್ಲಿದ್ದಾನೆ ಹೇಳಬಲ್ಲಿರಾ?' ಅಂತ ನಾನು ಕೇಳಿದೆ.

'ಗೊತ್ತಿಲ್ಲ, ನಾವು ವಿಚಾರಿಸಿಲ್ಲ ನೀವು ರಾತ್ರಿಗೆ ಬಂದರೆ ಎಲ್ಲಾ ತಿಳಿಯುತ್ತದೆ' ಎಂದಳು ಅವಳು. ಆಗ ಒಳಗಿನ ಕೋಣೆಯಲ್ಲಿ ಬಾಗಿಲೆಡೆ ಯಿಂದ ಇಣಿಕಿನೋಡುತ್ತಿದ್ದ ಒಳ್ಳೇ ಷೋಕಿನ ಹುಡುಗಿಯೊಬ್ಬಳು ಒಯ್ಯಾರ ದಿಂದ ಹೊರಗೆ ಬಂದು— 'ನೀವು ಯಾರು ಅವರ ಮಾವನೋ?' ಎಂತ ಕೇಳಿದ್ದು, ನನಗೆ ಆಶ್ಚರ್ಯವಾಯಿತು.

'ಹೌದು, ನಿನಗೆ ಹ್ಯಾಗೆ ಗೊತ್ತಾಯಿತು?' ಎಂತ ನಾನು ಕೇಳಿದೆ. ಆ ಹೆಣ್ಣು ಸೂಳೇ ಮೇಳದಿಂದ ಬೆಡಗು ಬಿನ್ನಾಣ ಮಾಡಿಕೊಂಡು ಮುಗುಳು ನಗುತ್ತ ಅವರೇ ಅಂದರು ನನ್ನ ಮಾವ ಒಬ್ಬರು ನನ್ನನ್ನು ಹುಡುಕಿಕೊಂಡು ಬಂದಾರೊಂತ, ಹಾಗೂ ಅವರ ಹೆಂಡತಿಯನ್ನು ಕೂಡಾ ಕರಕೊಂಡು ಬರುವ ಆಲೋಚನೆಯಲ್ಲಿದ್ದಾರಂತೆ. ನಿಮ್ಮ ಮಗಳನ್ನು ತಾನೇ ಅವರಿಗೆ ಕೊಟ್ಟದ್ದು?' ಎಂದು ಕೇಳಿಯೇ ಬಿಟ್ಟಳು. 'ಹೌದೆ'ನ್ನದೆ ಹೇಗೆ ತಪ್ಪಿಸಿ

ಕೊಳ್ಳಲಿ? 'ನಿಮ್ಮೊಡನೆ ಇಷ್ಟೆಲ್ಲ ಸಮಾಚಾರವನ್ನು ಅವನು ಯಾಕೆ ಹೇಳಿದ?' ಅಂತ ಕೇಳಿದೆ ನಾನು. ಆಗ ಆ ದೊಡ್ಡ ಹೆಂಗುಸು— 'ಹಾಗೆಷ್ಟು ಸಮಾಚಾರ ಹೇಳಿದ್ದಾರೆ? ಏನೋ ಕೋಣೆ ಬಾಡಿಗೆ ವಿಷಯ ಮಾತಾಡುವಾಗ, ಏನೋ ತಮ್ಮ ಹೆಂಡತಿಯನ್ನು ಸಹಾ ಕರಕೊಂಡು ಬಂದೇನು ಅಂತ ಒಂದಿಷ್ಟು ಸೂಚನೆ ಮಾಡಿದರು. ಒಂದು ವೇಳೆ ನನ್ನ ಮಾವ ನನ್ನನ್ನು ವಿಚಾರಿಸಿಕೊಂಡು ಬಂದರೂ ಬಂದಾರು, ಹಾಗೆ ಬಂದರೆ ನಾನು ಬರುವವರೆಗೆ ಇರಲಿಕ್ಕೆ ಹೇಳಿ, ಅಂತ ನಮಗೆ ಹೇಳಿದ್ದಾರೆ. ಹೆಚ್ಚಿನ ಸಂಗತಿ ನಮಗೇನು ಗೊತ್ತು?' ಎಂದಳು. 'ಓಹೊ ಸರಿಸರಿ. ನೀವು ತಾಯಿ ಮಗಳ ಹಾಗೆ ಕಾಣುತ್ತದೆ?' ಎಂದು ಮತ್ತೂ ಕೇಳಿದೆ ನಾನು. 'ಹೌದು, ಇದು ನನ್ನದೇ ಸ್ವಂತ ಮನೆ ಇವಳು ನನ್ನ ಮಗಳು ಅಳಿಯ ಬೊಂಬಾಯಿಯಲ್ಲಿದ್ದಾನೆ' ಎಂದಳು ಸುಳ್ಳೋ ಸತ್ಯವೋ! ಮತ್ತೆ ರಾತ್ರಿಯವರೆಗೆ ಅಲ್ಲಿಯೇ ಕೂತಿರುವಂತೆ ಆ ಹೆಂಗುಸರು ನನ್ನನ್ನು ಒತ್ತಾಯ ಪಡಿಸಿದರೂ, ನನಗೇಕೋ ಅದು ಮುಳ್ಳಿನ ಮನೆಯಂತೆ ಕಂಡದ್ದರಿಂದ, ನಾನು ಕೆಳಗೆ ಬಂದು, ಬೀದಿಯ ಬದಿಯಲ್ಲಿದ್ದೊಂದು ಹೊಟೆಲಿಗೆ ಹೊಕ್ಕೆನು. ಸಂಜೆಯವರೆಗೂ ಅಲ್ಲಿಯೇ ಇದ್ದೆ ಅಲ್ಲಿ ಹೊಟೆಲಿನ ಯಜಮಾನನೊಡನೆ ಮೆಲ್ಲನೆ ಮಾತಿಗೆ ಪ್ರಾರಂಭ ಮಾಡಿ, ಆ ಮನೆಯ ವಿಚಾರವನ್ನು ಕುರಿತು ಪ್ರಸ್ತಾಪ ತಂದೆ. ಆಗ ತಿಳಿಯಿತು; ಆ ಮನೆಯೊಡತಿ ಸೂಳೆಯ ಕುಲದವಳೆಂದು. ಅವಳ ಮಗಳು ಇತ್ತೀಚೆಗೆ ಯಾರೋ ಒಬ್ಬನ ಜತೆಯಲ್ಲಿದ್ದಳಂತೆ; ಈಗ ಕೆಲವು ದಿನಗಳಿಂದ ಅವನನ್ನು ಬಿಟ್ಟು ತಾಯಿಯ ಬಳಿಗೆ ಬಂದಿರುವ ಹಾಗೆ ಕಾಣುತ್ತದಂತೆ. ಅವಳ ಸಂಬಂಧಿಕರಾದ ಇನ್ನೂ ಇಬ್ಬರು ಮೂವರು ಹೆಂಗುಸರು ಆ ಮನೆಯ ಕೋಣೆಗಳಲ್ಲಿ ಬಾಡಿಗೆಗೋ ಏನು ಮಣ್ಣೋ ಇದ್ದಾರಂತೆ. ಹೀಗೆ ಉತ್ತಮವಾದ ಆ ಮನೆಯ ಪರಿಚಯವು ಸ್ವಲ್ಪ ಮಟ್ಟಿಗೆ ಗೊತ್ತಾಯಿತು. ಕತ್ತಲಾದರೂ ನಮ್ಮ ಅಳಿಯ ರಾಯನ ಆಗಮನವಾಗಲಿಲ್ಲ. ರಾತ್ರಿ ಸುಮಾರು ಎಂಟು ಗಂಟೆಯ ಸುಮಾರಿಗೆ 'ವಿಕ್ಟೋರಿಯಾ'ದ ಸ್ಟ್ಯಾಕಲ್ಲಿನಲ್ಲಿ ಬಂದು ಆ ಮನೆಯ ಮುಂದಿಳಿಯಿತು ಅವನ ಸವಾರಿ. ಮನೆ ಬಾಗಿಲಿನಲ್ಲಿಯೇ ನಾನು ಅವನನ್ನು ಸಂಧಿಸಿಬಿಟ್ಟೆ. ಅಬ್ಬ! ಅವನ ಆ ಡ್ರೆಸ್ಸಿನ ವೈಭವದಲ್ಲಿ ಫಕ್ಕನೆ ಅವನ ಗುರುತು ಸಿಕ್ಕುವುದೇ ಕಷ್ಟವಾಯ್ತು ನನಗೆ. ಅವನ ಆ ಸೂಟೇನು? ಕೋಟೇನು? ಬೂಟೇನು? ಬಹಳ ಆಶ್ಚರ್ಯವೂ ಆಯಿತು. 'ಏನೋ

ಹೇಳದೆ ಕೇಳದೆ ಹೀಗೆ ಓಡಿ ಬಂದು ಬಿಟ್ಟೆ ?' ಆತ ಕೇಳಿದೆ. 'ಇಲ್ಲ ಮಾವ, ಏನೋ ಸಂದರ್ಭ ಹಾಗೆ ಬಂತು. ನಿಮ್ಮಲ್ಲಿ ನನಗೇನೂ ಒಗ್ಗಲಿಲ್ಲ. ನಾನು ಹಾಕಿದ ಕಾಗದ ಸಿಕ್ಕಿತೆ?' ಅಂತ ಕೇಳಿದ. ಅವನ ಮುಖದಿಂದ ಸಿಗರೇಟು ವಾಸನೆ ಕೂಡ ಹೊಡೆಯುತ್ತಿತ್ತು. ಆ ಬಚ್ಚಾಳಿಗಳ ಮನೆಯ ಮುಂದೆ ಮಾತಾಡುವುದು ಸರಿಯಲ್ಲವೆಂದು ಭಾವಿಸಿ ನಾನು 'ಸ್ವಲ್ಪ ಹಾಗೆ ಹೋಗೋಣ ನಡಿ. ನಿನ್ನೊಡನೆ ಒಂದು ವಿಷಯ ಮಾತಾಡಲಿಕ್ಕಿದೆ.' ಅಂದೆ ಸೈಕಲ್ ತಳ್ಳಿಕೊಂಡು ಹಾಗೇ ಹೊರಟೆ. 'ಏನೋ? ಎಂಥಾ ಮೋಸವೋ ಇದು? ಕಳ್ಳ ನೋಟು ಬರೆದಿಟ್ಟು ಪೆಟ್ಟಿಗೆಯಿಂದ ಹಣಕದ್ದುಕೊಂಡು ಬಂದಿದ್ದಿ?' ಅಂತ ನಾನು ಕೇಳಿದ್ದಕ್ಕೆ— 'ಏನಂದಿರಿ? ಕಳ್ಳನೋಟೆ? ಸತ್ಯವಾದ ನೋಟದು. ಅದರಲ್ಲಿ ಕಳ್ಳತನವೇನುಂಟು?' ಎಂತ ನನ್ನನ್ನೆ ದಭಾಯಿಸಿಕೊಂಡು ವಾದಮಾಡಿದ ಅಬ್ಬಾ! ಎಷ್ಟು ಧೈರ್ಯ ಗೊತ್ತೇ ಅವನಿಗೀಗ? ಆ ಮೇಲೆ ನಾನು ಬೋರೀಸರ ಕದ್ದ ಸಂಗತಿ ಕೇಳಿದ್ದಕ್ಕೆ 'ಛೀ ನನಗೆ ಗೊತ್ತಿಲ್ಲವಲ್ಲ ಅದು? ಅವಳೇ ಎಲ್ಲಿಯೋ ಕಳಕೊಂಡಿರಬೇಕು. ಸುಂಸುಮ್ನೇ ನನ್ನ ಮೇಲೆ ಇಲ್ಲದ ಅಪರಾಧವೆಲ್ಲಾ ಹೊರಿಸುವಿರಾ ನೀವು? ಇದೆಂಥ ಅನ್ಯಾಯ?' ಎಂದು ಹಾರಿದ. ಈ ವಿಷಯವಾಗಿ ನನಗೂ ಅವನಿಗೂ ಬಹಳ ಕಠಿಣ ಮಾತುಗಳೇ ಆದುವು ಕಡೆಗೆ ನಾನೇ ಸಮಾಧಾನಕ್ಕೆ ಬಂದು, ನೋಡೋ, ನಿನ್ನನ್ನ ಈಗಲೇ ಪೋಲೀಸಿಗೆ ಹಿಡಿಸಿಬಿಡುವುದೇನೂ ಕಷ್ಟವಿಲ್ಲ ನನಗೆ. ಇನ್ನೂ ನನ್ನ ಅಳಿಯನಾತ ಕೈಕಾದುಕೊಂಡಿದ್ದೇನೆ ಹೇಳು, ನಿನ್ನ ಉದ್ದೇಶ ಏನೆಂಬುದನ್ನು ಸ್ಪಷ್ಟವಾಗಿ ಹೇಳಿಬಿಡು' ಎಂದೆ. ಅದಕ್ಕೆ ಅವನು 'ನಿಮ್ಮ ಹೊಟೆಲಿನಲ್ಲಿಯೂ ನಿಮ್ಮ ಮನೆಯಲ್ಲಿಯೂ ಇರಲು ನನ್ನಿಂದಾಗದು ಅವಳು ಕಲಿತು ಟೀಚರ್ ಗೀಚರ್ ಮಾಡುವುದೂ ನನಗೆ ಸೇರದು. ಹೀಗೆ ಅವಳು ಬರುವುದಾದರೆ ಬರಲಿ; ಅವಳನ್ನು ಕಾಪಾಡುವ ಭಾರವು ನಂದು' ಎಂದ. ನೀನೀಗ ಯಾವ ಕೆಲಸ ಹಿಡಿದಿದ್ದಿ? ಎಲ್ಲಿ ಬಿಡಾರ ಮಾಡಿದ್ದಿ? ಅಂತ ಕೇಳಿದೆ ನಾನು ಪ್ರಕೃತ ಇಲ್ಲಿಯೇ ಮುಂದೆ ಎಲ್ಲಿಯಾಯ್ತೋ ಅಲ್ಲಿ. ಕೆಲಸಕ್ಕೆ ಒಂದು ಕಂಪೆನಿಯಲ್ಲಿದ್ದೇನೀಗ. ನನ್ನ ಕೈಯಲ್ಲಿ ಯಾವಕೆಲಸವೂ ಆಗಲಿಕ್ಕಿಲ್ಲವೆಂತ ನೀವು ಯೋಚನೆ ಮಾಡಿರಬೇಕು; ಎಂದು ಸ್ವಲ್ಪ ಕುತ್ತಿಯೇ ಹೇಳಿದ. 'ನನಗೆ ಚೆನ್ನಾಗಿ ತೋರಿಸಿರುವಿಯಲ್ಲ ನಿನ್ನ ಕೆಲಸದ ಚಾತುರ್ಯ? ಅಂಥಾದ್ದೇ ನಿನಾದರೂ ಕೆಲಸ

ಹಿಡಿದಿರಬೇಕು ನೀನು' ಎಂದೆ ನಾನೂ. 'ಏನಂದಿರಿ?' ಅಂತ ನನ್ನನ್ನು ದುರುಗುಟ್ಟಿ ನೋಡಿದ. 'ಏನೋ ವ್ಯಾಪಾರಾ ಗೀಪಾರಾ ಅಂತ ಭಾರೀಭಾರೀ ಕಾಗದ ಬರೆದಿಯಲ್ಲಾ? ಎಂಥಾವ್ಯಾಪಾರ? ಏನಪ್ಪಾಂತ ಕೇಳಿದೆ' ಅಂತ ನಾನಂದೆ. 'ಹಾಗೆ ಕೇಳಿ ಮತ್ತೆ ಸರಿಯಾಗಿ ನಾನೀಗ ಒಂದು ಜನರಲ್ ಮರ್ಚಂಟ ಕಂಪೆನೀಲಿ ಇದ್ದೇನೆ. ಬೇಗದಲ್ಲಿ ಆ ಕಂಪೆನಿಯ ಒಬ್ಬ ಭಾಗಸ್ಥನೂ ಆಗುತ್ತೇನೆ' ಅಂದ. ಇವನ ಯೋಗ್ಯತೆ ನನಗೆ ಗೊತ್ತಿಲ್ಲವೆ? 'ಓಹೊ! ಯಾವ ಮುಟ್ಠಾಳನಪ್ಪಾ ನಿನ್ನನ್ನು ಭಾಗಸ್ಥನನ್ನಾಗಿ ಸೇರಿಸಿಕೊಳ್ಳುವವ? ಎಲ್ಲಿ ಅದನ್ನೆಲ್ಲಾ ನನಗೆ ಪ್ರತ್ಯಕ್ಷವಾಗಿ ತೋರಿಸುವಿಯಾ? ನಿನ್ನ ಗೆಳೆಯ ಯಾರವನು? ನಡಿ ಅವನ ಮನೆಗೆ' ಅಂದೆ. 'ಅದೆಲ್ಲ ನಿಮಗೆ ಬಿಚ್ಚಿ ತೋರಿಸುವ ಅಗತ್ಯವಿಲ್ಲ. ಕಾರಣ ನೀವೀಗ ನನ್ನ ಮೇಲೆ ವಿರೋಧ ಭಾವನೆ ಉಳ್ಳವರಾಗಿದ್ದೀರಿ. ನಂಬುಗೆ ಇಲ್ಲದಿದ್ದರೆ ಬಿಡೀ. ನಿಮ್ಮ ಮಗಳು ನಿಮ್ಮ ಬಳಿಯಲ್ಲೇ ಇರಲಿ' ಎಂದು ಸುಮಿದ. 'ಮತ್ತೆ ನನ್ನ ಮಗಳನ್ನು ನಿನ್ನಂಥ ಪೋಲೀ ನಾಯಿಗೆ ಬಲಿಕೊಡುವೆನೆಂತ ತಿಳಿದೆಯಾ? ಘಟಿಂಗ!' ಅಂತ ಸಿಟ್ಟು ಉಕ್ಕಿ ಬಂದು ನಾನವನನ್ನು ಬಯ್ದು ಹೊರಟು ಬಂದುಬಿಟ್ಟೆ. ಅವನ ಇರುವಿಕೆಯನ್ನು ಪೋಲೀಸಿಗೆ ತಿಳಿಸಿ, ಸರಿಯಾದ ಶೋಧ ಮಾಡಿದರೆ ಆ ಬೋರೀಸರ ಪತ್ತೆಯಾದೀತೆಂತಲೇ ನನಗೆ ಕಾಣುತ್ತದೆ'

ಹೀಗೊಂದು ದೊಡ್ಡ ಕತೆಯ ಹಾಗೆ ಹೇಳಿ, ಮತ್ತೂ ಹೇಳಿದರು:— "ನೋಡಿದಿಯಾ ಇಲ್ಲಿ ಬಹಳ ಸಾಧುವಾಗಿ ಹೇಗಿದ್ದ? ಒಳಗೊಳಗೇ ತುಂಟರ ಸಹವಾಸಕ್ಕೆ ಹ್ಯಾಗೆಬಿದ್ದ? ಅವನು ಈ ಮದರಾಸಿನೊಳಗೇ ಇರುವುದನ್ನು ನೋಡಿದರೆ, ಇಲ್ಲಿರುವಾಗಲೇ ಅವನಿಗೆ ದುಷ್ಟ ಸ್ನೇಹಿತರಾಗಿದ್ದಾರಂತ ಸ್ಪಷ್ಟವಾಗಿ ಕಾಣುತ್ತದೆ. ಅವನ ದಂಭಾಡಂಬರ ನೋಡಿದರೆ ಕಂಪೆನಿಯೂ ಸುಳ್ಳು, ಕೆಲಸವೂ ಸುಳ್ಳು. ಕದ್ದ ಐನೂರು ರೂಪಾಯಿ ಹಾಳು ಮಾಡುತ್ತಾ ಇದ್ದಾನೆ ಹೇಗೋ ಒಂದು. ಇದರ ಮೇಲೆ ಗಿಳಿಯಂಥ ಹುಡುಗಿಯನ್ನು ಕೂಡಾ ಹಾಳು ಮಾಡಬೇಕೆಂಬ ಯೋಚನೆ. ಗಿರಿಜಾ, ನಿನಗೆ ಹೇಗನಿಸುತ್ತದೆ?" ಎಂದು ನನ್ನ ಮುಖವನ್ನು ನೋಡಿದರು ತಂದೆ.

ನಾನೇನು ಹೇಳಿಯೇನು? ತಾಯಿಯೇ ಉತ್ತರ ಕೊಟ್ಟಳು:— "ಸಾಯಲಿ ಬಿಡೀ ಇನ್ನು. ದೇವರ ದಯೆದಿಂದ ಮುಂದೆ ಏನಾದರೂ ಒಳ್ಳೆಯದು ಆಗಲಿಕ್ಕಿಲ್ಲಾಂತ ಹ್ಯಾಗೆ ಹೇಳುವದು? ಪೋಲೀಸು ಗೀಲೀಸಂತ

ಇನ್ನೇನೂ ಗಲಾಟೆ ಮಾಡಬೇಡಿ. ಸಧ್ಯ ನಮ್ಮ ಮಗಳ ಹಣೇಬರಹ ಹೀಗೇಂತ ಸುಮ್ಮ ನಿರುವ. ”

ನನೂ ಇಗದು ಸರಿಯೆನಿಸಿತು. ತಂದೆಯವರೂ ನಿಟ್ಟುಸಿರಿಟ್ಟು ಸುಮ್ಮನಾದರು.

ಕ್ರಮೇಣ ನಾನು ವಿದ್ಯೆಯಲ್ಲೇ ಮನಸ್ಸನ್ನು ಹರಿಯಿಸುತ್ತ, ‘ ಗಂಡ ’ ಎಂಬ ಭಾವನೆಯನ್ನು ಅಡಗಿಸಿಕೊಳ್ಳಲು ಪ್ರಯತ್ನ ಪಡುತ್ತಿದ್ದೆ. ಆಗಾಗ ನನಗಾದ ಆ ಮದುವೆಯೂ, ಗಂಡ ನೊಂದಿಗನ ಆ ಸಹವಾಸವೂ ಒಂದು ಕೆಟ್ಟ ಕನಸಿನಂತೆ ಭೋಧೆಯಾಗುತ್ತಿತ್ತು. ಎಷ್ಟಾದರೂ ಅದು ಮದುವೆಯ ಉರುಳು. ಅದರ ಗುರುತು ಪೂರ್ಣವಾಗಿ ಮಾಯ್ದು ಹೋಗುವ ಬಗೆ ಹೇಗೆ ? ಆದರೆ ನಿಜವಾಗಿ ನನಗೇನೂ ದೊಡ್ಡ ಚಿಂತೆ ಹತ್ತಿಕೊಳ್ಳಲಿಲ್ಲ. ಪತಿಯ ಮೇಲೆ ಹರಿದ ನನ್ನ ಪ್ರೇಮವು ಅವರ ಮೊರಟುತನದಿಂದ ಮತ್ತೆ ನನ್ನ ಹೃದಯದೊಳಗೇ ಹುದುಗಿ ಹೋಯಿತು. ಅಂತೆಯೆ ಗಂಡನಗಲಿಕೆಯ ದುಃಖವು ನನ್ನನ್ನು ಸ್ವಲ್ಪವೂ ಬಾಧಿಸಲಿಲ್ಲ.

ಮುಂದಿನ ವರ್ಷದಲ್ಲಿ ನಾನು ಟ್ರೈನಿಂಗಿನಲ್ಲಿ ತೇರ್ಗಡೆಯಾದೆನು. ನನ್ನ ತಂದೆಯ ಬಹಳವಾದ ಸಾಧನೆಯಿಂದ ಒಂದು ಯೋಗ್ಯ ಶಾಲೆಯಲ್ಲಿ ೩೦ ರೂಪಾಯಿಯ ಪ್ರಾರಂಭ ಸಂಬಳದಲ್ಲಿ ಮಾಸ್ತರಿಣಿ ಕೆಲಸವೂ ನನಗೆ ಸಿಕ್ಕಿತು. ಅದೊಂದು ದೇಶೀಯ ಬಾಲಿಕಾ ಪಾಠಶಾಲೆ ಆ ಶಾಲೆಯ ಸಂಸ್ಥಾಪಕರು ‘ ವೇದಾದ್ರಿ ಅಯ್ಯರ್ ’ ಎಂಬ ಸುಪ್ರಸಿದ್ಧರಾದ ಘನ ವಂತರು. ಆದುದರಿಂದ “ ವೇದಾದ್ರಿ ದೇಶೀಯ ಬಾಲಿಕಾ ಪಾಠಶಾಲೆ ” ಎಂಬುದು ಶಾಲೆಯ ಹೆಸರಾಗಿತ್ತು. ಈಗ ವೇದಾದ್ರಿ ಅಯ್ಯರು ತೀರಿ ಹೋಗಿದ್ದು, ಅವರ ಮಗ ಸದಾಶಿವಂ ಈ ಶಾಲೆಯ ಆಡಳಿತದಾರರಾಗಿ ದ್ದರು. ಇವರು ತಂದೆಗಿಂತಲೂ ಬೇರೊಂದು ರೀತಿಯಲ್ಲಿ ಪ್ರಸಿದ್ಧ ಪುರು ಷರು. ಬಹು ದೊಡ್ಡ ಕಾಂಗ್ರೆಸ್ ವಾದಿಗಳು. ಅವರ ಆಡಳಿತೆಗೆ ಒಳಪಟ್ಟ ಮೇಲೆಯೇ ಈ ಶಾಲೆಯ ಹೆಸರಿಗೆ ‘ ದೇಶೀಯ ’ ಎಂಬ ಅಂಕಿತವು ಸೇರಿತ್ತು ಅದಕ್ಕನುಸಾರವಾಗಿ ಹೊಸ ಯೋಜನೆಗಳ ಯೋಚನೆಗಳೂ ನಡೆಯು ತ್ತಿದ್ದುವು. ಇಂತಹ ಶಾಲೆಗೆ ಸೇರಿದಂದಿನಿಂದ ನನ್ನ ಮನಸ್ಸಿನಲ್ಲಿ ಹೊಸ ತೊಂದು ಆಹ್ಲಾದದ ಗಾಳಿ ಬೀಸಲಾರಂಭಿಸಿತ್ತು. ಸಣ್ಣಪುಟ್ಟ ಲೀಲೆಯ ಬಾಲಿಕೆಯರಿಗೆ ಲೀಲೆಯಿಂದ ಪಾಠ ಪ್ರವಚನ ಮಾಡಿಸುವುದೆಂದರೆ ನನಗೆ

ಅಂತ್ಯಂತ ಸಂತೊಷವೆನಿಸಿತು ಇದರಲ್ಲೆಲ್ಲಾ ನನ್ನ ಹೆಚ್ಚಿನ ಸಂತೋಷಕ್ಕೆ ಕಾರಣಳಾದವಳೆಂದರೆ ನನ್ನ ಹಳೆಯ ಗೆಳತಿ ಮಾಲತಿ. ಅವಳೂ ಅದೇಶಾಲೆ ಯಲ್ಲಿ ಮಾಸ್ತರಿಣಿ.

೭

ಮೊದಲು ನಾನು 'ಬೆಸೆಂಟ್ ಹೈಸ್ಕೂಲಿನಲ್ಲಿ' ಕಲಿಯುವಾಗ, ಮಾಲತಿಯೂ ಅದೇ ಶಾಲೆಗೆ ಬರುತ್ತ, ನನ್ನ ಸಹಾಧ್ಯಾಯಿನಿಯಾಗಿದ್ದಳು. ಆಗ ಅವಳು ನನ್ನ 'ಗೆಳತಿ ಮಾಲತಿ' ಎಂದಷ್ಟೇ ಗೊತ್ತಿತ್ತಲ್ಲದೆ, ಅವಳು ಯಾರು-ಏನೆಂಬ ವಿಷಯ ಹೆಚ್ಚೇನೂ ತಿಳಿದಿರಲಿಲ್ಲ. ನಾನು ಆ ಹೈಸ್ಕೂಲು ಬಿಟ್ಟಮೇಲೆ ಒಂದೆರಡು ಬಾರಿ ಬೀಚಿನಲ್ಲಿ ಅವಳನ್ನು ಸಂಧಿಸಿದ್ದೆ. ಈಗ ನೋಡಿದರೆ ಅವಳು 'ವೇದಾದ್ರೀ ದೇಶೀಯ ಬಾಲಿಕಾಪಾಠಶಾಲೆಯ' 'ಚರಕ ತರಗತಿ, ಗೆ ಅಧ್ಯಾಪಿಕೆ. ಅಲ್ಲಿ ಅವಳನ್ನು ನಾನು ನೋಡಿದ ಮೊದಲ ನೋಟವು ನನ್ನನ್ನು ಆಶ್ಚರ್ಯದಲ್ಲಿ ತೇಲಿಸಿತು. ಮೊದಲು ತುಂಬ ಚಪಲೆಯಾಗಿದ್ದವಳು ಈಗ ತುಂಬ ಶಾಂತಿಯಾಗಿದ್ದಾಳೆ. ಅದಕ್ಕೆ ಕಳೆಗಟ್ಟು ವಂತೆ ನಿರಾಡಂಬರವಾದ ಖಾದಿಯ ಶೀರೆ- ರವಕೆಗಳಿಂದ ಅಚ್ಚ ದೇಶೀಯ ಮೂರ್ತಿಯಂತೆ ಕಂಗೊಳಿಸುತ್ತಿದ್ದಳು. ಮೊದಲು ಅವಳನ್ನು ನೋಡಿದವರು ಈಗ ಹೀಗಾಗುವಳೆಂದು ಊಹಿಸುವಂತೆಯೇ ಇರಲಿಲ್ಲ.ಹಿಂದೆ ಸಿಲ್ಕು ಪಾವಾಡೆ ಸಿಲ್ಕು ಜಾಕೆಟ್ಟು ಮೊದಲಾದ ಥಳಕು ಪಳಕುಗಳಿಂದ ಹಾರಾಡುತ್ತಿದ್ದವಳು ಈಗ ಅದೆಷ್ಟು ಸ್ಥಿರಮೂರ್ತಿಯಾಗಿ ಶೋಭಿಸುತ್ತಿದ್ದಾಳೆ! ಬಳಿಕ ತಿಳಿಯಿತು ಅವಳ ದಾರುಣ ಚರಿತ್ರೆಯ ಒಂದೊಂದೇ ಪರಿಯ ತಿರುಳು. ಎಲ್ಲವೂ ಒಂದು ಮೂರು ನಾಲ್ಕು ವರ್ಷಗಳೊಳಗೆ ನಡೆದ ಪರಿವರ್ತನೆ.

ಸಂಜೆ ಶಾಲೆ ಬಿಟ್ಟ ಮೇಲೆ ನಾನೂ ಅವಳೂ ಬಹಳ ಹೊತ್ತು ಮಾತಾ ಡಿಕೊಳ್ಳುತ್ತಿದ್ದೆವು ಮಾಲತಿಯೆಂದರೆ ಯಾರೆಂದು ಈ ಸಂದರ್ಭದಲ್ಲಿಯೇ ನನಗೆ ಸರಿಯಾಗಿ ತಿಳಿದುದು. ಆ ಶಾಲೆಯ ಸ್ವತ್ವಾಧಿಕಾರಿಗಳಾದ ಸದಾ ಶಿವಂರ ಖಾಸ ಸಹೋದರಿ ಅವಳು. ವೇದಾದ್ರಿ ಅಯ್ಯರರು ಅವಳನ್ನು ಒಬ್ಬ ದೊಡ್ಡ ಐ. ಸಿ. ಎಸ್. ವರನಿಗೆ. ಮದುವೆ ಮಾಡಿ ಕೊಟ್ಟಿದ್ದರಂತೆ. ಆ ಐ. ಸಿ. ಎಸ್ ಗಂಡ ಅಡ್ಡ ದಾರಿಗೆ ಬಿದ್ದು, ಒಬ್ಬಳು ಆಂಗ್ಲೋ ಇಂಡಿ ಯನ್ ಸ್ತ್ರೀಯೊಂದಿಗೆ ಸಂಬಂಧವಿಟ್ಟುಕೊಂಡು ಮಾಲತಿಯನ್ನು ನಾನಾ ವಿಧವಾಗಿ ಪೀಡಿಸುತ್ತಿದ್ದನಂತೆ. ಒಂದು ದಿನ ಅವನು ಇವಳನ್ನು ಒದೆದು,

ಯಾವುದೋ ಕೋಲಿನಿಂದ ಹೊಡೆದಾಗ ದೊಡ್ಡ ಗಾಯವಾಗಿ ಇವಳು ಮೂರ್ಛಿತೆಯಾಗಿ ಬಿದ್ದು ಭಾರೀ ಗಲಾಟೆಯಾಯಿತಂತೆ. ಅವನೆಂತಹ ರಾಕ್ಷಸನೊ! ಆ ಸಂದರ್ಭದಲ್ಲಿ ತಂದೆ ಇವಳನ್ನು ಮನೆಗೆ ಕರೆದುಕೊಂಡು ಬಂದ ಮೇಲೆ ನಂತರ ಇವಳಿಗೂ ಆ ಗಂಡನಿಗೂ ಸಂಬಂಧವೇ ಕಡಿದು ಹೋಯಿತಂತೆ. ಮಾಲತಿಯ ಮೇಲೆ ತುಂಬ ಅನಿಕರವಾಗಿರುವವರು ಇವಳ ಅಣ್ಣ ಸದಾಶಿವಂ ಒಬ್ಬರೇ. ಈಕುರಿತು ಮಾಲತಿ ಹೇಳಿದ್ದೇನೆಂದರೆ– "....ಅಣ್ಣನು ನನ್ನ ದುರ್ಗತಿಯನ್ನು ನೋಡಿ ರಾತ್ರಿ-ಹಗಲು ದುಃಖಿಸುತ್ತಿದ್ದನು. ನನಗೆ ಇಷ್ಟವಿದ್ದರೆ, ಬೇರೆ ವರ ಸಿಕ್ಕಿದರೆ ನನಗೆ ಇನ್ನೊಂದು ಮದುವೆ ಮಾಡಲೇ ಬೇಕೆಂದು ಅಣ್ಣನ ನಿರ್ಧಾರ. ಆದರೆ ಇದು ಸಾಮಾಜಿಕ ನಡೆವಳಿಕೆಗೆ ಒಪ್ಪುವಂಥಾದ್ದಲ್ಲವೆಂದು ತಂದೆ ಒಪ್ಪಲಿಲ್ಲ. ಈ ಮಧ್ಯದಲ್ಲಿ ತಂದೆಯೂ ತೀರಿ ಹೋದರು ನಂತರ ಅಣ್ಣನ ಸಾಮಾಜಿಕ ಸುಧಾರಣೆಯ ಆವೇಶವೂ ಹೆಚ್ಚಿತು. ಅವನ ಸ್ವಭಾವಕ್ಕೆ ಅನುಭಾವಿಗಳಾದವರೇ ಅವನ ಸಹಚಾರಿಗಳೂ ಗೆಳೆಯರೂ ಆಗಿದ್ದರು. ಅವರಲ್ಲಿ ನನ್ನ ಗುರುತು ಪರಿಚಯದವರೂ ಒಬ್ಬರು ಅವರ ಮೇಲೆ ನನಗೆ ಮೊದಲೇ ಪ್ರೇಮವಿತ್ತು. ಇದು ಅಣ್ಣನಿಗೂ ಗೊತ್ತು. ಅವರು ಮಧ್ಯಮತರಗತಿಯವರಾದುದರಿಂದ, ನಾನು ಅತ್ಯಂತ ಸುಖವಾಗಿರಲಿಕ್ಕೆ ಐ. ಸಿ. ಎಸ್. ವರನೇ ಸರಿಯೆಂದುಕೊಂಡು ತಂದೆಯವರು ಹಟ ಹಿಡಿದು ನನಗೆ ಹಾಗೆ ಮದುವೆ ಮಾಡಿದರು ನನ್ನ ಅಣ್ಣ ಮುಂತಾದವರು ನಾವು ಬಾಯಿಯಿಂದ ಸುಧಾರಣೆ ಸುಧಾರಣೆ ಎಂದರೆ ಪ್ರಯೋಜನವಿಲ್ಲ, ಸ್ವಯಂಮಾಡಿ ತೋರಿಸಬೇಕು, ಎಂದು ಪಂಥ ಹಾಕಿದವರಾಗಿದ್ದರು ಅಂತೆಯೇ ಅಣ್ಣನ ಸಾಧನೆಯಿಂದ, ಮೊದಲು ನಾನು ಯಾರನ್ನು ಪ್ರೇಮಿಸಿದ್ದೆನೋ ಅವರೇ ನನ್ನನ್ನು ಮದುವೆ ಮಾಡಿಕೊಳ್ಳುವಂತಾಯಿತು. ನನ್ನ ಅಣ್ಣನು ಕೂಡಾ ಭಗ್ನಜೀವಿತೆಯಾದ ಯೋಗ್ಯ ತರುಣಿಯನ್ನೆ ಮದುವೆಮಾಡಿಕೊಳ್ಳಬೇಕೆಂಬ ಪಂಥದಲ್ಲಿ ಇನ್ನೂ ಅವಿವಾಹಿತನಾಗಿಯೆ ಇದ್ದಾನೆ. ಏನೋ ಇವರೆಲ್ಲ ನವ ಸುಧಾರಣೆಯ ವೇಗಕ್ಕೆ ಧೈರ್ಯವಾಗಿ ಎದೆಗೊಟ್ಟು ನಿಂತುದರಿಂದ ನನ್ನ ಬಾಳು ಆನಂದದ ನೆಮ್ಮದಿಯ ದಾರಿಯಲ್ಲಿ ಸಾಗುವಂತಾಯಿತು. ಮಹಾತ್ಮಾಗಾಂಧಿಯವರ ದಿವ್ಯ ಬೋಧನೆಯ ಮೇಲೆ ಶ್ರದ್ಧೆಯನ್ನಿಟ್ಟು ತಕಲಿಯಲ್ಲಿ ನೂಲು ತೆಗೆಯುವ ಅಭ್ಯಾಸವನ್ನು ಮಾಡಿದ್ದೇನೆ. ನನ್ನ ಅಣ್ಣನು ಶುದ್ಧವಾದ ಗಾಂಧೀ ಭಕ್ತನು, ಈ ಶಾಲೆಯನ್ನು ಕೂಡ, ಗಾಂಧೀ-

ಜೀಯುವರ ಬೋಧಾನುಸಾರವಾಗಿ ದೇಶೀಯ ಶಿಕ್ಷಣಕ್ಕೆ ಪರಿವರ್ತಿಸಬೇಕೆಂದಿದ್ದಾನೆ. ನನ್ನಿಂದಾಗಿ ತಕಲಿಯ ತರಗತಿ ತೆರೆಯಲ್ಪಟ್ಟಿದೆ. ಇನ್ನು ಹಿಂದೀ ಹೊಲಿಗೆ ಮೊದಲಾದ ತರಗತಿಗಳನ್ನೂ ಪ್ರಾರಂಭಿಸಬೇಕೆಂದಿದ್ದಾನೆ........"

ನಾನು ಹಿಂದೀ ಕಲಿತಿರುವದು ಮಾಲತಿಗೆ ಗೊತ್ತಿರಲಿಲ್ಲ. ಭವಿಷ್ಯದ್ಭಾರತದಲ್ಲಿ ಹಿಂದಿಗೆ ಒಳ್ಳೆಯ ಮಹತ್ವವು ಬರುವುದೆಂಬ ಲಕ್ಷಣವಿದ್ದುದರಿಂದ ನನ್ನ ತಂದೆಯ ಒತ್ತಾಯದಿಂದ ನಾನು ಅದನ್ನೂ ಕಲಿತಿದ್ದೆನು. ನನ್ನ ತಂಗಿ ಸರೋಜೆ ಹೊಲಿಗೆ, ಚಿತ್ರಕೆಲಸ ಮುಂತಾದ ಕುಶಲತೆಗಳಲ್ಲಿ ಪ್ರವೀಣೆಯಾಗಿದ್ದಳು. "ಹಾಗಾದರೆ ಗಿರಿಜಾ, ನಿಮ್ಮಿಬ್ಬರನ್ನೂ ಅಣ್ಣನ ಮುಂದೆ ಶಿಫಾರಸು ಮಾಡುವೆನು. ನೀನೊಮ್ಮೆ ನಮ್ಮ ಮನೆಗೆ ಬಾ. ಅಣ್ಣನ ಪರಿಚಯ ಮಾಡಿಸುವೆನು." ಎಂದಳು ಮಾಲತಿ.

ಆ ಶಾಲೆಯ ಮುಖ್ಯಾಡಳಿತದಾರರಾದ ಸದಾಶಿವರನ್ನು ನಾನು ನೋಡದವಳೇನೂ ಅಲ್ಲ. ಮೊಟ್ಟಮೊದಲಲ್ಲಿ ನಾನು ಅವರ ಮುಂದೆಯೇ ಮಾತಾಡಿದ್ದೆ. ಅವರು ಕೇಳಿದ ಕೆಲವು ಸಕ್ರಮವಾದ ಪ್ರಶ್ನೆಗಳಿಗೆ ಉತ್ತರಕೊಟ್ಟಿದ್ದೆ. ಅಲ್ಲದೆ ಅವರು ಆಗಾಗ ಶಾಲೆಯ ಮೇಲು ನೋಟಕ್ಕಾಗಿ ಬರುವದೂ ಉಂಟು. ಶುಭ್ರ ಖಾದಿಯ ನಿರಾಡಂಬರವಾದ ಭೂಷಣದಿಂದ, ಶುಭ್ರತೇಜೋವಂತ ಸುಂದರಾಕಾರವಾಗಿರುವ ಯೌವನ ಮೂರ್ತಿಯವರು. ಉದಾತ್ತಭಾವನೆಗಳನ್ನು ತುಂಬಿತುಳುಕಿಸುವಂತಹ ಗಂಭೀರ ಪುರುಷರವರು. ಮಾಲತಿಯ ಬಾಯಿಯಿಂದ ಅವರ ವರ್ಣನೆಗಳನ್ನು ಕೇಳಿದ ಮೇಲೆ, ಅವರ ಮೇಲೊಂದು ಕುತೂಹಲವು ನನ್ನೊಳಗೆ ಏಳಲಾರಂಭವಾಗಿತ್ತು. ಮತ್ತೆ ಮತ್ತೆ ಅವರ ಚರಿತೆಯೇ ನೆನಪಿಗೆ ಬರುತ್ತಿತ್ತು. ಎಂತಹ ವಿಚಿತ್ರ ಆದರೆ ಉದಾತ್ತ ಭಾವನೆಯವರದು! ಸಾಮಾಜಿಕ ಕಟ್ಟುಪಾಡುಗಳನ್ನು ಕಡಿಯುವಂತಹ, ಕ್ರಾಂತಿಕಾರಕವಾದ ಮದುವೆಯನ್ನೆ ಮಾಡಿಕೊಳ್ಳುವುದೆಂದು ಪಣತೊಟ್ಟ ವ್ಯಕ್ತಿ! ಅವರ ತಂಗಿ ಮಾಲತಿಯ ಚರಿತ್ರೆಯಾದರೋ ನನ್ನ ಚರಿತ್ರೆಯ ಒಂದು ಛಾಯೆಯೇ ಆಗಿದೆ........

ಮಾಲತಿ ನನ್ನನ್ನು ಸುಲಭದಲ್ಲಿ ಬಿಡಲಿಲ್ಲ ಒತ್ತಾಯಮಾಡಿ ನನ್ನನ್ನು ಅವರ ಮನೆಗೆ ಕರೆದೊಯ್ದು, ಅವಳಣ್ಣನ ಭೇಟಿ ಮಾಡಿಸಿದಳು. ಹಿಂದೀ ವಿಷಯಕವಾದ ಮಾತುಕತೆ ನಡೆಯಿತು. ನಾನು ಹಿಂದೀ ಕಲಿತಿರುವುದನ್ನು ಕೇಳಿ ಅವರಿಗೆ ತುಂಬ ಸಂತೋಷವಾಯಿತು. ಅವರ ಮಾತು ಅದೆಷ್ಟು ಮಧುರ!

'ದಕ್ಷಿಣ ಭಾರತದ ಹಿಂದೀ ಕೇಂದ್ರ'ದ ಅದೊಂದು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರೆ, ಹಿಂದೀ ಅಧ್ಯಾಪಿಕೆಯಾಗಬಹುದೆಂದು, ಸಲಹೆಯನ್ನಿತ್ತು ಅದಕ್ಕೆ ತಕ್ಕ ಸಹಾಯವನ್ನೂ ಶ್ರೀ ಸದಾಸಿವಂರೇ ಮಾಡಿದರು. ಆ ಪರೀಕ್ಷೆ ಅಷ್ಟೊಂದು ಕಷ್ಟದ ಪರೀಕ್ಷೆಯೆನಿಸಲಿಲ್ಲ ನನಗೆ. ಆದರಲ್ಲಿ ನಾನು ತೇರ್ಗಡೆ ಹೊಂದಿದೆ ಶಾಲೆಯಲ್ಲಿ ನನ್ನಿಂದ ಹಿಂದೀ ತರಗತಿಯೂ ಪ್ರಾರಂಭವಾಯಿತು.

ಈ ಸಂಧಿಯಲ್ಲಿ ನನ್ನ ತಂಗಿ ಸರೋಜ, 'ಥರ್ಡ್‌ಫಾರಂ' ತೇರ್ಗಡೆಯಾದಳು. ಮಾಲತಿಯ ಪ್ರೋತ್ಸಾಹದ ಮೇಲೆ ಸದಾಶಿವಂರು ಅವಳನ್ನೂ ಕರೆಯಿಸಿಕೊಂಡು, ಅವಳ ಕುಶಲವಿದ್ಯೆಗಳಿಗೆ ಮೆಚ್ಚಿದರು. ಚಿತ್ರಕಲೆಯಲ್ಲಿಯೂ ಅವಳು ಸ್ತುತ್ಯಳಾಗಿದ್ದಾಳೆನ್ನುವುದಕ್ಕೆ, ಈ ಮೊದಲು ಶಾಲೆಯಲ್ಲಿ ನಡೆದೊಂದು ಚಿತ್ರಪ್ರದರ್ಶನದಲ್ಲಿ ಅವಳಿಗೆ ಪ್ರಥಮ ಬಹುಮಾನವು ಸಿಕ್ಕಿತ್ತು. ಅಲ್ಲದೆ ಅವಳಲ್ಲಿ ಕವಿತಾ ಪ್ರತಿಭೆ ಬೇರಿತ್ತು ಇತ್ತೀಚೆಗೆ ಕೆಲವು 'ಸಣ್ಣಕತೆ' ಗಳನ್ನೂ 'ಕವಿತೆ' ಗಳನ್ನೂ ಬರೆದು, ಕೆಲವು ಕನ್ನಡ ಪತ್ರಿಕೆಗಳಿಗೆ ಕಳುಹಿಸಿ ಕೊಡುತ್ತಿದ್ದಳು. ಈ ವಿಶೇಷದಾರಿಯಲ್ಲಿ ಮುಂದಕ್ಕೆ ಒಳ್ಳೆಯ ಯಶಸ್ಸಿಗೆ ಮುಟ್ಟುವಳೆಂಬ ಲಕ್ಷಣವೆಲ್ಲ ಅವಳಲ್ಲಿದ್ದುದನ್ನು ಸದಾಶಿವಂ ಕಂಡುಕೊಳ್ಳದಿರಲಿಲ್ಲ. ಅವರು ಅವಳನ್ನೂ ಅದೇ ಶಾಲೆಗೆ ಹೊಲಿಗೆ ಚಿತ್ರಕಲೆಗಳ ಅಧ್ಯಾಪಿಕೆಯನ್ನಾಗಿಸಿ ಸೇರಿಸಿಕೊಂಡರು. ಸರೋಜೆಯ ಕುಶಲಚಿತ್ರಗಳಿಂದ ಆ ಶಾಲೆಗೇ ಒಂದು ಹೊಸ ಸೌಂದರ್ಯವು ಪ್ರಾಪ್ತವಾದಂತಾಯಿತು ಎಲ್ಲ ಮಾಸ್ತರಿಣಿಯರಿಗಿಂತಲೂ ಸರೋಜೆ ಚಿಕ್ಕವಳಾದರೂ, ಬಾಲಸರಸ್ವತಿಯಂತೆ ಬೆಳಗಲಾರಂಭಿಸಿದಳು.

ಮುಂದೆ ಕೆಲವು ದಿನಗಳಮೇಲೆ ಸದಾಶಿವಂರ ಅಕ್ಕನ ಮಗಳು ವಾಸಂತಿಗೆ 'ಟ್ಯೂಷನ್' ಹೇಳಿಕೊಡಬೇಕೆಂದು ಗೊತ್ತುಮಾಡಲ್ಪಟ್ಟಿತು. ನನಗೂ ನಮ್ಮ ಹೆತ್ತವರಿಗೂ ಇದು ಒಪ್ಪಿಗೆಯೇ ಆದುದರಿಂದ ಸರೋಜೆಯೂ ಒಪ್ಪಿಕೊಂಡಳು ದಿನಾ ಸಂಜೆಯ ಮೇಲೆ ರಾತ್ರಿ ಎಂಟು ಗಂಟೆಯವರೆಗೆ. ವಾಸಂತಿಗೆ ಸರೋಜೆಯ ಪ್ರತ್ಯೇಕ ಪಾಠವು ಸದಾಶಿವಂರ ಮನೆಯಲ್ಲಿ ನಡೆಯುತ್ತಿತ್ತು. ಆಗ ನಾನೂ ಮಾಲತಿಯೊಡನೆ ಮಾತಾಡುತ್ತ ಕೆಲವು ಬಾರಿ ಅಲ್ಲಿಯೇ ಕುಳಿತಿದ್ದು, ನಂತರ ತಂಗಿಯೊಂದಿಗೆ ಮನೆಗೆ ಬರುತ್ತಿದ್ದೆ. ಕೆಲವು ಬಾರಿ ನಾನೊಬ್ಬಳೇ ಶಾಲೆ ಬಿಟ್ಟಕೂಡಲೇ ಮನೆಗೆ ಬರುತ್ತಿದ್ದೆ. ಸರೋಜೆ

ಅನಂತರ ಬರುತ್ತಿದ್ದಳು.

ಈಗ ತಂದೆಯವರು ತಮ್ಮ ಹೋಟೆಲನ್ನು ಮಾರಿಬಿಟ್ಟರು. ೫೦೦ ರೂಪಾಯಿ, ಕಳುವಾಗಿ ಹೋದಮೇಲೆ ಒಂದರ ಮೇಲೊಂದಾಗಿ ವ್ಯಾಪಾರದಲ್ಲಿ ನಷ್ಟವೇ ಉಂಟಾಗುತ್ತ ಬರುವಾಗ, ಸಾಲದವರು ಬೇರೆ ದಾವೆಗೆ ಹೊರಡುವರೆಂದು ತಿಳಿದು ಬರಲು ಆ ಹೊಟೆಲನ್ನು ಮಾರಿಯೇ ಸಾಲ ತೀರಿಸಬೇಕಾಯಿತು. ಅನಂತರ ತಂದೆಯವರು ಮುಖ್ಯ ಉದ್ಯೋಗವೇನೂ ಕೈಕೊಳ್ಳದೆ ಸುಮ್ಮನೇ ಮನೆಯಲ್ಲಿದ್ದರು. ಈ ವರೆಗೆ ತುಂಬ ಕಷ್ಟಪಟ್ಟಿದ್ದೀರೆಂದೂ, ಇನ್ನೇನೂ ಕಷ್ಟಕೆಲಸ ಮಾಡದೆ ವಿಶ್ರಾಂತಿ ತೆಗೆದುಕೊಳ್ಳಬೇಕೆಂದೂ ನಾನು ಒತ್ತಾಯ ಮಾಡಿ ಕೂಡಿಸದಿದ್ದರೆ, ಅವರು ಯಾವ ಹೋಟಲಲ್ಲಾದರೂ ಕೆಲಸಕ್ಕೆ ಸೇರಿಯೇ ಬಿಡುತ್ತಿದ್ದರು. ಅಂತೂ ಸದ್ಯ ಕೆಲಸದ ತೊಳಲಾಟವಿರಲಿಲ್ಲ ಅವರಿಗೆ. ಸದಾಶಿವರ ದೊಡ್ಡ ಮನಸ್ಸಿನಿಂದಾಗಿ ನಾವು ಅಕ್ಕ-ತಂಗಿಯರಿಗೆ ಯೋಗ್ಯವಾದ ಉದ್ಯೋಗವು ದೊರಕಿದುದರಿಂದ, ಹೆತ್ತವರಿಗೆ ತುಂಬ ಆಧಾರವಾಯಿತೆಂದು ಬೇರೆ ಹೇಳಬೇಕೆ? ತಂದೆ 'ನಮಗೆ ಗಂಡುಮಕ್ಕಳಿಲ್ಲದ ಕೊರತೆಯೇ ತುಂಬಿಬಂತೆಂ'ದು ಬಾಯಿಬಿಟ್ಟು ಹೇಳಿಕೊಂಡರು ಈ ಸಮಾಧಾನ ಸ್ಥಿತಿಯಲ್ಲಿ ನನ್ನ ಕೊರಳಿಗೆ ಬಿದ್ದು ಸಡಿಲಿ ಹೋದ ಮದುವೆಯ ಉರುಳಿನ ನೋವು ಮಾತ್ರ ಒತ್ತಿದರೆ ನೋಯುವಂತೆ ಒಮ್ಮೊಮ್ಮೆ ನೆನಪಾಗುತ್ತಿತ್ತು ಬಾಲಶಾರದೆಯಂತಹ ಸರೋಜೆಯನ್ನಾದರೂ ಯೋಗ್ಯ ವರನಿಗೆ ಕೊಟ್ಟು ಮದುವೆ ಮಾಡಬೇಕೆಂಬುದು ಹೆತ್ತವರ ವಾಂಛೆ ಆದರೆ ಸರೋಜೆ--"ನನಗೆ ಮದುವೆ ಮಾಡುವ ಆಲೋಚನೆಯೇ ಬೇಡ. ಅಕ್ಕನಿಗಾದ ಗತಿಯನ್ನು ನೋಡಿದರೆ, ಮದುವೆಯೊಂದು ಬಾಧಾಕಾರಿಯಾದ ಉರುಳಿನಂತೆಯೇ ಕಾಣುತ್ತದೆ. ಅದು ಹೂಮಾಲೆಯಂತಹ ಭ್ರಮೆಯನ್ನು ಹುಟ್ಟಿಸಿ, ಕಡೆಗೆ ಉರುಳಿನಂತೆ ಪರಿಣಮಿಸುವದೇ ಹೆಚ್ಚು. ಹೇಗೂ ನೀವು ನನಗೆ ಯೋಗ್ಯವಾದ ಶಿಕ್ಷಣವನ್ನು ಕೊಡಿಸಿ, ಸ್ವತಂತ್ರವಾಗಿ ಜೀವನವನ್ನು ನಡೆಯಿಸಲು ಅನುಕೂಲವಾಗುವಂತಹ ದಾರಿಗೆ ಹಚ್ಚಿರುತ್ತೀರಿ. ಇನ್ನು ನೀವು ನನ್ನ ಮದುವೆಯ ಚಿಂತೆಯನ್ನು ಹಚ್ಚಿಕೊಳ್ಳಬೇಡಿರಿ." ಎಂದು ಖಂಡಿತವಾಗಿ ಹೇಳುತ್ತಿದ್ದಳು. ಆದರೂ ಹೆಣ್ಣುಮಗಳಿಗೆ ಮದುವೆ ಮಾಡದೆ ಹೆತ್ತವರ ಮನಸ್ಸಿಗೆಹೇಗೆ ನೆಮ್ಮದಿಯಾದೀತು? ಮದುವೆ, ಉರುಳಿನಂತೆ ಬಾಧಾಕಾರಿ ಯಾಗುವುದಾದರೆ ಎಲ್ಲರೂ ಅನಾದಿ ಕಾಲದಿಂದಲೂ ಏ[illegible]

ಮದುವೆಯಾಗುತ್ತಾರೆ? ಅದು ಉರುಳಿನಂತಾಗುವುದಾದರೆ, ಅದನ್ನು ಕಳಚಿ ಹಾಕಲು ತಕ್ಕ ನ್ಯಾಯಾನುಕೂಲತೆಗಳು ಸಾಮಾಜಿಕ ವಿಧಿಗಳಲ್ಲಿರಬೇಕಾದೀತು ಅದು ಎಷ್ಟರ ಮಟ್ಟಿಗೆ ಇದೆ? ಅದಿಲ್ಲದಿರುವದರಿಂದ ರಹಸ್ಯದಲ್ಲಿ ಅದೆಷ್ಟು ಅನೀತಿಗಳು ನಡೆಯುತ್ತವೆ? ಇದರ ಪರಿಣಾಮವಾಗಿ ಅದೆಷ್ಟು ಮಂದಿಯ ಬಾಳುವೆ ಹಾಳಾಗುತ್ತವೆ? ದುರಂತಕ್ಕೆ ಮುಟ್ಟುತ್ತವೆ? ಈ ಅನುಕೂಲತೆಗಳನ್ನು ಕಲ್ಪಿಸಲಿಕ್ಕಾಗಿಯೇ ಸದಾಶಿವಂರಂಥವರು ಪಣತೊಟ್ಟು ನಿಂತಿರುವುದು ಸ್ತುತ್ಯವೇ ಹೌದೆನ್ನಬೇಕು.

ನನ್ನ ಹೆತ್ತವರ ದೃಷ್ಟಿ ಕೂಡ ಇದೇ ನ್ಯಾಯದ ಮೇಲೆ ಹೋಗುತ್ತಿದ್ದಿತು. ನಾನು ಇಷ್ಟಪಡುವುದಾದರೆ ನನಗೂ ಬೇರೆ ಮದುವೆ ಮಾಡಿ, ನನ್ನ ಜೀವನದ ಅರಳನ್ನೂ ನೋಡಬೇಕೆಂಬ ಬಯಕೆ ಅವರೊಳಗೆ ಅಡಗಿದ್ದಿತು. ಈ ಕುರಿತು ಅವರು ತಮ್ಮೊಳಗೆ ಮಾತಾಡಿಕೊಂಡ ಕೆಲವು ಬೇಗುದಿಯ ಮಾತುಗಳು ನನ್ನ ಕಿವಿಗೆ ಬಿದ್ದಿದ್ದುವು. "ಅಯ್ಯೋ! ನಮ್ಮ ಗಿರಿಜೆಯ ಗತಿ ಹೀಗಾಗಿಹೋಯಿತೆ? ಆ ಬಚ್ಚಾಳಿ ಗಂಡನ ಬಳಿಗೆ— ಆ ನಿರಾಧಾರಿಯಾದ ಪುಂಡನ ಬಳಿಗೆ ಇವಳನ್ನು ಹೇಗೆ ಕಳಿಸುವುದು? ಅವನು ಇವಳನ್ನು ದಾರಿಗೆ ಹಾಕಿ ಕೊಲ್ಲಲಾರನೆ? ಪಾಪ! ಈ ಪ್ರಾಯದಲ್ಲಿ ಎಲ್ಲ ತರುಣಿಯರಿಗಿರುವ ಆಶೆ ಇವಳಿಗೂ ಇಲ್ಲವೆ? ಮನಸ್ಸಿನೊಳಗೆ ಅದೆಷ್ಟು ನೋಯುವಳೋ! ಅದೆಷ್ಟು ಬೇಯುವಳೋ! ಬಾಯಿತೆರೆದು ಹೇಳಲಿಕ್ಕಾಗುತ್ತದೆಯೆ? ರೂಪದಲ್ಲಿ ಕಡಿಮೆಯಾದವಳೆ? ಅಂದ-ಚಂದವಾಗಿ ಒಳ್ಳೇ ಗಿಳೀ ಹಾಗೆ ಇದ್ದಾಳೆ." ಎಂದಳೊಮ್ಮೆ ನನ್ನ ತಾಯಿ. ಅದಕ್ಕೆ ತಂದೆ— "ಎಲ್ಲ ಹೌದು ಏನು ಮಾಡುವುದು? ಧೈರ್ಯದಿಂದ ಮುಂದೆ ನಿಲ್ಲುವ ಒಳ್ಳೇ ಯೋಗ್ಯನಾದ ಪುರುಷನಿದ್ದರೆ ಮದುವೆ ಮಾಡಿಯೇ ಕೊಡಬೇಕೆಂದಿದ್ದೇನೆ. ಅನೇಕ ಕಡೆ ಹೀಗೆಲ್ಲ ಆಗುತ್ತಿರುವ ಸುದ್ದಿಯೂ ಕೇಳುತ್ತದೆ. ಇಂತಹುದಕ್ಕೆಲ್ಲ ಆ ಸದಾಶಿವಂ ಬಹಳ ಗಟ್ಟಿಗ. ಒಮ್ಮೆ ಅವನೊಡನೆಯೇ ಇದನ್ನು ಪ್ರಸ್ತಾಪಿಸಿ ನೋಡಬೇಕೆಂದಿದ್ದೇನೆ........" ಎಂದಿದ್ದರು. ಆದರೆ ಹಾಗೆ ಮುಂದುವರಿಯಲು ಅವರಿಗೆ ತಕ್ಕ ಸಂದರ್ಭವೊದಗಿರಲಿಲ್ಲ.

ಒಮ್ಮೆ ತಾಯಿ ನನ್ನ ಮನೋಗತವನ್ನರಿಯಲು ಪ್ರಯತ್ನಿಸಿದಳು.— "ಗಿರಿಜ, ಈ ಪ್ರಾಯದಲ್ಲಿ ನೀನು ಹೀಗೆ ಒಂಟಿಯಾಗಿರುವದನ್ನು ನೋಡಿದರೆ, ನಮಗೆ ತುಂಬ ಸಂಕಟವಾಗುತ್ತದ್ದಮ್ಮ ನಾನೊಂದು ಕೇಳುತ್ತೇನೆ. ಏನೂ ನಾಚುಗೆ ಪಡಬೇಡ. ಇನ್ನೊಂದು ಮದುವೆ ಯಾಗುವ ಇಚ್ಛೆ ನಿನಗಿದೆಯೆ?

ಇದ್ದರೆ ಪ್ರಯತ್ನ ಮಾಡಬೇಕೆಂದು ಅವರು ಹೇಳುತ್ತಾರೆ'' ಎಂದಳೊಮ್ಮೆ. "ಇಂತಹ ಆಲೋಚನೆಯೇ ಬೇಡವೆ"ಂದೂ, "ನನಗೀಗಿನ ಬಾಲಸೇವಾ ಜೀವನವೇ ಪರಮಾನಂದದಾಯಕವಾಗಿರುವುದೆ"ಂದೂ, "ಉಳಿದವೇಳೆಯಲ್ಲಿ ಮಾತಾಪಿತೃ ಸೇವೆಯೇ ದಿವ್ಯಸುಖಪ್ರದವಾಗಿರುವುದೆ''ಂದೂ ಖಂಡಿತವಾಗಿ ಹೇಳಿಬಿಟ್ಟೆನು ಇದರಲ್ಲೇನೂ ನಾನು ಮುಚ್ಚುಮರೆ ಮಾಡಲಿಲ್ಲ. "ತಂಗಿ ಸರೋಜೆಗೆ ಮಾತ್ರ ಒಳ್ಳೆಯ ವರನನ್ನು ನೋಡಿ ಮದುವೆ ಮಾಡುವ ಯೋಚನೆ ಮಾತ್ರ ಶ್ರದ್ಧೆಯಿಂದ ಮಾಡಿರಿ'' ಎಂದೂ ಹೇಳಿದೆನು. ನನಗೆ ಪುನರ್ವಿವಾಹವೆ ? ಕನಸಿನಲ್ಲಿಯೂ ನನಗೆ ಈ ಯೋಚನೆ ಇರಲಿಲ್ಲ. ನನ್ನ ಕಣ್ಣಿಗೊಪ್ಪಿದ ಒಬ್ಬನೊಡನೆ ನನ್ನ ಮದುವೆಯಾಗಿತ್ತು; ಆ ಮೇಲೆ ಗಂಡನೆಂಬ ಗೌರವವೂ ಅವರ ಮೇಲೆ ಬಿತ್ತು; ಪ್ರೇಮವೂ ಅಲ್ಲಿಗೇ ಹರಿಯಿತು. ಕಡೆಗೆ ಅವರ ನಡತೆಯಿಂದ ಆ ಪ್ರೇಮದ ಒರತೆ ಬತ್ತಿಹೋಯಿತು. ಹೃದಯವು ಉರಿದು ಭಗ್ನವಾಗಿ ಈಗೆಲ್ಲ ಶಾಂತವೂ ಆಯಿತು. ಇನ್ನೆಲ್ಲಿಯ ಪ್ರೇಮ ? ಇನ್ನೆಲ್ಲಿಯ ಮದುವೆ? ಈಗ ನನಗೆ ಅದರ ಗೊಡವೆಯೇ ಇಲ್ಲ. ಆ ಶಾಲೆ ಮತ್ತು ಆ ಶಾಲೆಯ ಎಳೆ ಹುಡುಗಿಯರೇ ನನ್ನ ಪ್ರೇಮಾವಾಸ. ಆ ಮಕ್ಕಳೇ ನನ್ನ ಮಕ್ಕಳು. ಇದರಲ್ಲಿಯೇ ನಾನು ಇಲ್ಲದ ಸುಖಗಳನ್ನೆಲ್ಲ ಕಾಣಬಲ್ಲೆನೆಂಬ ನಂಬುಗೆ ನನಗಿತ್ತು. ಪ್ರೀತಿಯ ತಂದೆ-ತಾಯಿಯರ ಸೇವೆಯೇ ಆ ನಂಬುಗೆಗೆ ಆಧಾರವಾಗಿತ್ತು. ಆಹಾ ! ನಾನೊಬ್ಬಳು ವ್ಯಾವಹಾರಿಕ ಸನ್ಯಾಸಿನಿಯಾಗಿರುವೆನು. ಪುತ್ರಹೀನರಾದ ತಂದೆ-ತಾಯಿಗಳನ್ನು ಕಡೆತನಕವೂ ಸೇವಿಸುವೆನು. ಇದೇ ನನ್ನ ನಿಶ್ಚಯ.

ಆದರೆ ನವಕನ್ಯೆಯಾದ ಸರೋಜೆಯೂ ನನ್ನಂತೆ ಏಕಾಗಬೇಕು ? ಒಳ್ಳೆಯ ರೂಪವತಿ. ಅವಳನ್ನು ನೋಡಿದ ಯಾವ ಪುರುಷನೂ ಬೇಡೆನ್ನಲಾರನು. ಹೌದು. ಅದನ್ನೂ ನಾನು ಗಮನಿಸಿದ್ದೇನೆ. ಅವಳನ್ನೊಮ್ಮೆ ನೋಡಿದ ತರುಣರ ನೋಟವು ಮತ್ತೆ ಮತ್ತೆ ಅವಳ ಮುಖದ ಕಡೆಗೇಹರಿಯುವುದನ್ನು ನಾನು ಕಂಡುಹಿಡಿದಿರುತ್ತೇನೆ. ಆದರೆ ಯೋಗ್ಯವರನು ಅವಳಿಗೆ ದೊರೆಯಬೇಕೆಂಬುದು ನನ್ನ ಮನಃಪೂರ್ವಕವಾದ ಆಕಾಂಕ್ಷೆ. ಅವಳು ವಿವಾಹ ಮಾಡಿಕೊಂಡು, ಹೆಣ್ತನದ ಎಲ್ಲ ಸುಖಾವಸ್ಥೆಗಳನ್ನೂ ಅನುಭವಿಸಿ ಬಾಳಲೇಬೇಕು. ಇದಕ್ಕೆ ಅವಳು ಒಪ್ಪುವುದಿಲ್ಲವೆಂಬ ಕಾರಣಕ್ಕಿಂತಲೂ ತಕ್ಕ ಯೋಗವು ಕೂಡಲಿಲ್ಲವೆಂದರೇ ಚೆನ್ನು.

ಸದಾಶಿವಂ ಅವಳನ್ನು ವಾಸಂತಿಗೆ ಪ್ರತ್ಯೇಕ ಪಾಠ ಹೇಳಿಕೊಡಲು, ತಮ್ಮ ಮನೆಯಲ್ಲಿ ಏರ್ಪಾಡು ಮಾಡಿಕೊಡುವದರಲ್ಲಿ ಏನಾದರೂ ಅವರ ಸ್ವಾರ್ಥವಿದ್ದೀತೇ ಎಂಬ ಸಂದೇಹವು ನನ್ನ ಮನದೊಳಗೆ ಮೆಲ್ಲನೆ ಮೂಡುತ್ತಿದ್ದಿತು. ಈ ಸಂದೇಹ ಅದೇಕೆ ಮನಸ್ಸಿಗೆ ಹೊಕ್ಕಿತೋ ಏನೊ! ಇದರ ಪ್ರವೇಶದಿಂದ ಸರೋಜಾ–ಸದಾಶಿವಂರವರು ಅಡಿಗಡಿಗೆ ಜತೆಗೂಡ ತೋರಲಾರಂಭಿಸದರು ಮನಸ್ಸಿಗೆ! ಆಹಾ! ಎಂತಹ ಒಪ್ಪುವ ಜೋಡಿ! ಸರೋಜ ಒಳ್ಳೇ ಬೆಳಗುವ ಚೆಲುವೆ; ಸದಾಶಿವಂರೂ ಅದಕ್ಕೊಪ್ಪುವಂತಹ ಚೆಲುವರು. ಇಬ್ಬರನ್ನೂ ವಧೂ-ವರರಾಗಿ ನೋಡಿನೋಡಿ ನನ್ನ ಮನಸ್ಸು ಸಮ್ಮತಿಪಡುತ್ತಿತ್ತು. ಏಕೆ ಅವರಿಬ್ಬರಿಗೂ ವಿವಾಹವಾಗಬಾರದೆಂದು ಕೇಳುತ್ತಿತ್ತು. ಆದರೆ ಅಂತಸ್ತಿನ ವಿಷಯುವೇ ಅಡ್ಡ ಬಂದರೆ ಬರಬೇಕು. ಆ ಶ್ರೀಮಂತ ಪುತ್ರರು ದರಿದ್ರಕನ್ಯೆಯನ್ನು ವಿವಾಹ ಮಾಡಿಕೊಳ್ಳುವಷ್ಟು ಉದಾರರಾಗುವ ಸಂಭವ ವಿದೆಯೇ? ಅವರಿಗ ಅವರಂತಸ್ತಿಗೊಪ್ಪುವ ಸುರಸುಂದರಿಯಾದ ಕನ್ಯೆ ಬೇರೆ ಸಿಗಲಾರಳೆ?........ ಆದರೆ ಅವರು ತಮ್ಮ ಆದರ್ಶಕ್ಕೆ ಒಪ್ಪುವ ವಧುವನ್ನೆ ಮದುವೆ ಮಾಡಿಕೊಳ್ಳುವ ಪಣ ತೊಟ್ಟವರು. ಸರೋಜೆ ಅಂತಹ ಭಗ್ನ ಸುಖಳಾದ ಕನ್ಯೆಯೇನೂ ಅಲ್ಲ. ಮಿಕ್ಕೆಲ್ಲ ವಿಷಯುಗಳಲ್ಲಿಯೂ ಸರೋಜೆ ಅವರಿಗೆ ಒಪ್ಪುವವಳೇ. ಆದರೂ ಯಾರಿಗೆಗೊತ್ತು ?— ಸರೋಜೆಯ ಗುಣ ರೂಪಾದಿಗಳು ಅವರ ಮನಸ್ಸನ್ನು ಆಕರ್ಷಣೆ ಮಾಡಿದ್ದರೆ, ಅವರ ಪಣವು ಭಂಗವಾಗಲಾರದೆ? ಆ ಆಕರ್ಷಣೆಯಿಂದಲೇ ಅವರು ಅವಳನ್ನು 'ಟ್ಯೂಶನ್ನಿ'ಗೆ ಹಾಕಿರಲಾರರೆ? ಇದ್ದೀತಿದ್ದೀತು! ನಾನೂ ಕೆಲವುಬಾರಿ ಗಮನಿಸಿದ್ದೇನೆ; ಅವರ ಕಣ್ಣೋಟವು ಅಕಾರಣವಾಗಿ ಸರೋಜೆಯ ಮುಖಕಮಲದ ಕಡೆಗೇ ಓಡಿಯೋಡಿ ಬರುತ್ತಿತ್ತು. ಅನೇಕವೇಳೆ ಅಂತಹ ಕಾರಣವೇನೂ ಇಲ್ಲದೆ ಅವಳೊಡನೆ ಏನಾದರೊಂದು ಮಾತಿಗೆ ಪ್ರಾರಂಭಿಸುತ್ತಿದ್ದರು. ಅವರೊಡನೆ ಮುಖಕೊಟ್ಟು ಮಾತಾಡುವಾಗ, ಸರೋಜೆಯ ಮುಖವು ಲಜ್ಜೆಯಿಂದ ಕೆಂಪಾಗುತ್ತಿತ್ತು. ಆದರೆ ಒಡನೊಡನೇ ಅವಳು ಲಜ್ಜೆಯನ್ನು ಹೊಡೆದಟ್ಟುತ್ತಿದ್ದಳು. ಆಗ ಅವರ ಕಣ್ಣು ಹಸಿದ ಕಣ್ಣುಗಳಂತೆ ನನಗೆ ಭಾಸವಾಗಿದೆ. ಅದೇಕೋ? ಅದೇನೊ? ಒಮ್ಮೊಮ್ಮೆ ಅವರ ಸ್ವಭಾವವೇ ಹಾಗೆನ್ನಿಸುತ್ತಿತ್ತು. ಏಕೆಂದರೆ ಕೆಲವೊಮ್ಮೆ ನನ್ನ ಮುಖವನ್ನು ಅವರು ಅದೇರೀತಿಯಾಗಿ ನೋಡುತ್ತಿದ್ದರು. ಆ ನೋಟದಲ್ಲಿ 'ನನ್ನ ಆದರ್ಶತೆಗೊಪ್ಪುವ ವಧುವೆಂದರೆ ಇವಳೇ,

ಭಗ್ನಜೀವಿತೆಯಾದ ಯೋಗ್ಯವಧು ಇವಳೇ' ಎಂಬ ಅರ್ಥವು ಗರ್ಭಿತವಾಗಿರುವಂತೆ ನನ್ನ ಮನಸ್ಸಿಗೆ ತಟ್ಟುತ್ತಿತ್ತು! ಆಗೊಮ್ಮೆ ನನ್ನ ತಲೆಯೂ ನಾಚಿಕೆಯಿಂದ ತಗ್ಗಿಹೋಗಿತ್ತು. ಆಗ 'ಛೆ, ನನಗೇಕೆ ಇಂತಹ ಕೆಟ್ಟ ಸಂದೇಹ ಬಂತು ?' ಎಂದು ನನ್ನನ್ನು ನಾನೇ ತಿರಸ್ಕರಿಸಿಕೊಳ್ಳುತ್ತಿದ್ದೆ.

೮

ಇಂತಹ ಎಣಿಕೆಗಳಲ್ಲಿಯೇ ಹಲವಾರುದಿನಗಳು ಕಳೆದು ಹೋದುವು. ಅದೊಂದು ದಿನ ಸಂಜೆಯಲ್ಲಿ ನಾನು ಮಾಲತಿಯೊಡನೆ ಸದಾಶಿವರ ಮನೆಗೆ ಹೋಗಿದ್ದೆ. ಅಲ್ಲಿ ಗೊತ್ತುಪಡಿಸಿದೊಂದು ಕೋಣೆಯಲ್ಲಿ ಸರೋಜೆ ವಾಸಂತಿಗೆ ಹೊಲಿಗೆ ಹೇಳಿಕೊಡುತ್ತಿದ್ದಳು. ನಾನೂ ಮಾಲತಿಯೂ ಈಚೆಯ ಕೋಣೆಯಲ್ಲಿ ಕುಳಿತುಕೊಂಡು ಹರಟೆ ಹೊಡೆಯುತ್ತಿದ್ದೆವು. ಆಗ ಮಾತಿಗೆಮಾತು ಬಂದು ಮಾಲತಿಯೆಂದಳು— "ಗಿರಿಜಾ, ನಿನಗೆ ಇನ್ನೂ ನಿನ್ನ ಆ ದುರಾಚಾರಿ ಗಂಡನ ಆಶೆಯಿದೆಯೆ ?" ಎಂದು ಕೇಳಿದಳು. ಬಹುಶಃ ಏನೋ ಉದ್ದೇಶ ಪೂರ್ವಕವೇ ಕೇಳಿದಳೆಂದರಿತೆನು.

ಆಗ ನನ್ನ ಗಂಡ ವೆಂಕಟೇಶರು ಓಡಿಹೋಗಿ ಎರಡು ವರ್ಷ ಕಳೆದು ಹೋಗಿತ್ತು. ಮದರಾಸಿನ ಪುರುಷವಾಕಂದಲ್ಲಿರುವ ಯಾವುದೋ ಒಂದು ಕಂಪೆನಿಯಲ್ಲಿ ಕೂಲೀಕೆಲಸ ಮಾಡಿಕೊಂಡಿದ್ದಾರೆಂಬ ವರ್ತಮಾನವನ್ನು ತಂದೆಯ ಮೂಲಕ ನಾನು ಕೇಳಿದ್ದೆ. ಅವರು ಎಂತಹ ಕೆಲಸವೇ ಮಾಡಿಕೊಂಡಿರಲಿ, ನನಗೇನೂ ಚಿಂತೆಯಿರಲಿಲ್ಲ. ಅಧ್ಯಾಪಿಕತೆಯನ್ನು ಬಿಟ್ಟೇ ಬಿಡಬೇಕೆಂದಲ್ಲವೇ ಅವರ ಹಟ ? ಒಂದು ವೇಳೆ ಗಂಡನು ಯೋಗ್ಯನಿದ್ದು ಒಳ್ಳೆಯ ಸ್ಥಿತಿವಂತನಾಗಿದ್ದನಾದರೆ, ಅವನಿಗಿಷ್ಟವಿಲ್ಲದ ಕೆಲಸದಲ್ಲಿ ನಾನು ಹಟ ಹಿಡಿಯುವುದು ಸರಿಯಲ್ಲವೆನ್ನಬಹುದಿತ್ತು. ಇವರೋ ಠಕ್ಕರು. ಒಳಗೊಂದು ಕೆಲಸಮಾಡಿದರೆ ಬಾಯಿಯಲ್ಲಿ ಹೇಳುವುದು ಇನ್ನೊಂದು ದೊಡ್ಡದು. ಆ ಕದ್ದ ಐನೂರು ರೂಪಾಯಿಯನ್ನು ಪೂರಾ ಹಾಳುಮಾಡಿ, ಈಗಲೂ ಕಂಡಾಬಟ್ಟೆಯಾಗಿ ಹೇಗೋಹಾಗೆ ಜೀವಿಸಿರುವರಂತೆ. ಅಂತಹರೊಂದಿಗೆ ನಾನು ನನ್ನ ಸುಖಾಧಾರವಾದ ಅಧ್ಯಾಪಿಕತೆಯನ್ನು ಹೇಗೆ ಬಿಟ್ಟು ಹೋಗಲಿ ? ಇದೆಲ್ಲ ಮೊದಲೇ ಬಂದು ಗಂಟುಕಟ್ಟಿಟ್ಟಿದ್ದ ಉತ್ತರವೇ ಆಗಿತ್ತು. "ಇಲ್ಲ ಮಾಲತಿ, ಇನ್ನು ನನಗೆ ಗಂಡನೊಂದಿಗೆ ಬಾಳಿಯೇನೆಂಬ ನಂಬುಗೆಯೇ ಇಲ್ಲ. ನನಗೆ ಈಗಿನ ಬಾಳೇ ಪರಮ ಸುಖವಾಗಿದೆ." ಎಂದು

ಉತ್ತರವಿತ್ತೆ.

ಆದರೂ ನಿಸರ್ಗಸಿದ್ಧವಾದ ಬಯಕೆಗಳನ್ನು ಅಡಗಿಸಿಕೊಳ್ಳುವುದೂ ಬಲವಂತದಿಂದ ಸಹನೆಮಾಡಿಕೊಂಡಿರುವುದೂ ಬಹಳ ಕಷ್ಟವಲ್ಲವೆ ? ಇದೊಂದು ಕಠಿನವಾದ ನಿತ್ಯಪರೀಕ್ಷೆಯಲ್ಲವೆ ? ಯೌವನಕಾಲದಲ್ಲಿ ಅರಳುವ ಆ ದಿವ್ಯಕುಸುಮವನ್ನು ಅಮಿತಸ್ವೈರಣೆಯಿಂದ ಕಮರಗೊಳಿಸುವದು ಅಷ್ಟೇನೂ ಯೋಗ್ಯವಲ್ಲವೆಂದು ನನಗೆ ತೋರುತ್ತದೆ. ನೋಡುವವರಿಗೂ ತುಂಬ ಪರಿತಾಪಕರ !

"ಆದಕ್ಕೆ ? ನನ್ನ ಹಣೆಬರೆಹವೇ ಹೀಗಿದೆ."

"ಹಣೆಬರೆಹವೆಂದು ಸುಮ್ಮನೆ ಕೂತುಬಿಡುವುದು ಬದುಕನ್ನಿದಿರಿಸಲು ಧೈರ್ಯವಿಲ್ಲದವರ ಮಾತು."

"ಇಂದೇಕೆ ಈ ಮಾತು ತೆಗೆದಿ ಮಾಲತಿ ?"

"ಬೇಕೆಂತಲೇ ಗಿರಿಜಾ ! ನನ್ನ ಹಾಗೆ ನೀನೂ ಏಕೆ ಪುನರ್ವಿವಾಹ ಮಾಡಿಕೊಳ್ಳಬಾರದೂಂತ ?"

"ಪುನರ್ವಿವಾಹ ? ನನಗೆ ? ಛೀ ಛೀ, ನಮ್ಮ ಜಾತಿಯಲ್ಲಿ ಇವಕ್ಕೆ ಎಡೆಯೇ ಇಲ್ಲ !"

"ನನ್ನದುಕೂಡ ಇದೇ ಜಾತಿ ತಾನೆ ? ನನಗೆ ಯಾರು ಆಕ್ಷೇಪಣೆ ಮಾಡಿದ್ದಾರೆ ಹೇಳು ?

"ನಿನಗೂ ನನಗೂ ಎಲ್ಲಿಯ ಸಾಮ್ಯ ? ಬಡವರ ಮೇಲಿಲ್ಲವೇ ಸಮಾಜದ ಹರಿತವಾದ ಕತ್ತಿಯ ಹರಿದಾಟ ?"

"ಈ ನವಸುಧಾರಣೆಯ ತಿಕ್ಕಾಟದಲ್ಲಿ ಆ ಕತ್ತಿಯ ಅಲಗು ಈಗ ಬಡ್ಡಾಗಿರುವುದೆಂದು ತಿಳಿ. ಗಿರಿಜಾ, ನೀನು ಧೈರ್ಯದಿಂದ ಮನಸ್ಸು ಕೊಟ್ಟರೆ ನಾನೇ ನಿಂತು ನಿನಗೆ ಸಹಾಯಕಳಾಗುವೆನು."

"ಅಯ್ಯೋ ಬೇಡ ಬೇಡ, ಸದ್ಯ ಸುಮ್ಮನಿರು !"

"ಇಲ್ಲ ಗೆಳತೀ ! ನಿನ್ನ ಹೃದಯವು ಸುಟ್ಟು ಹೋಗುತ್ತಿರುವುದನ್ನು ನೆನೆದು ನಾನು ಸಹಿಸಲಾರೆ."

ನನ್ನ ಹೃದಯವನ್ನು ನೆನೆದುಕೊಂಡು ನನ್ನ ತಂದೆ-ತಾಯಿಗಳು ದುಃಖಿಸುವುದೂ ನನಗೆ ಈಗ ನೆನಪಾಯಿತು.

"ನೀನನ್ನುವುದರಲ್ಲಿ ನನಗೇನೂ ಆಶ್ಚರ್ಯವಿಲ್ಲ ಮಾಲತಿ. ಏಕೆಂದರೆ

ನನ್ನ ಹೆತ್ತವರು ಕೂಡ ನನ್ನ ಪರಿಯನ್ನು ನೆನೆನೆನೆದು ದುಃಖಿಸುವುದನ್ನು ನಾನು ಕೇಳಿದ್ದೇನೆ. ಆದರೆ ನೀವೆಲ್ಲಾ ನೆನೆದುಕೊಳ್ಳುವಷ್ಟು ದುಃಖಗ್ರಸ್ತೆ ನಾನಲ್ಲವೇ ಅಲ್ಲ!"

"ಅದೆಲ್ಲಾ ನಾನು ನಂಬಲಾರೆನಮ್ಮ. ನಂಬಬೇಕಾಗಿಯೂ ಇಲ್ಲ. ನೀನು ಹೀಗೆಯೇ ಆನಂದವನ್ನು ತಂದುಕೊಂಡು ಜೀವನವನ್ನು ಸಾಗಿಸಬಲ್ಲವ ಳಾಗಿದ್ದರೂ, ನಿನಗೊಬ್ಬ ಯೋಗ್ಯ ಪತಿಯೂ ಜತೆಗೂಡಿದನೆಂದರೆ, ನೀನೇನೂ ದುಃಖಿಸಲಾರಿ; ಬದಲಾಗಿ ಹೆಚ್ಚಿನ ಆನಂದವನ್ನೆ ಕಾಣುವಿ. ಇದಕ್ಕೆ ನಿನಗೆ ತಕ್ಕ ಯೋಗ್ಯತೆಯೂ, ಅನುಕೂಲವೂ ಇದ್ದು, ವೃಥಾ ಏಕೆ ಜೀವನವನ್ನು ಏಕಾಂಗಿನಿಯಾಗಿ ಕಳೆಯಬೇಕು?"

ಏನು ಉತ್ತರಕೊಡುವುದೆಂದು ತೋರದೆ ನಾನು ಸುಮ್ಮನಿದ್ದೆ. ಮಾಲತಿ ನನ್ನ ಕೈಹಿಡಿದೆಳೆದು ಒಂದು ನಿಲುವುಗನ್ನಡಿಯ ಮುಂದೆ ನಿಲ್ಲಿಸಿ—"ನೋಡೇ ಗಿರಿಜಾ! ನಿನ್ನ ಯೌವನದ ಪ್ರಭೆ ಹೇಗೆ ಕಾನನದ ಬೆಳುದಿಂಗ ಳಾಗಿ ಹೋಗುತಿರುವುದೋ ನೋಡು. ಇಂಥಾ ಜೀವನ ಕಾಲದ ವಸಂತ ಋತುವನ್ನು, ನೋಡಿದವರ ಹೃದಯದಿಂದ ನಿಟ್ಟುಸಿರನ್ನೆಳೆಯಿಸಿ, ನೀನೂ ಗುಪ್ತವಾದ ನಿಟ್ಟುಸಿರಿನಿಂದಲೇ ಬಾಳುವೆಯನ್ನು ಸಾಗಿಸಬೇಕೆ? ಇದು ನ್ಯಾಯವೆ?"

ನಾನು ಆವರೆಗೂ ನಿಲುವುಗನ್ನಡಿಯ ಮುಂದೆ ನಿಂತಿರಲಿಲ್ಲ. ಆಗ ತಾನೇ ರಾತ್ರಿ ಕಾಲಿಟ್ಟಿದ್ದ ಸಮಯವದು. ವಿದ್ಯುದ್ದೀಪಗಳಿಂದ ಉಜ್ವಲ ವಾಗಿ ಶೋಭಿಸುವ ಆ ಶ್ರೀಮಂತ ಮನೆಯ ಆ ವಿಶಾಲವಾದ ಕೊಟಡಿ ಯೊಳಗೆ, ನಿಲುವುಗನ್ನಡಿಯ ಮುಂದೆ ನಿಂತು ನಾನು ಆಶ್ಚರ್ಯಪರವಶ ಳಾಗಿ ಹೋದೆನು. 'ಹೀಗಿರುವೆನೇ ನಾನು?' ಎನಿಸಿತು. ನಾನು ಚೆಲುವೆ ಯರ ಕೂಟಕ್ಕೆ ಸೇರಿದವಳೇ ಎಂಬುದು ನನಗೆ ಗೊತ್ತಿತ್ತು. ನನ್ನನ್ನು ಕಂಡವರು, 'ಗಿಳಿಯಂತಿದ್ದಾಳೆ,' 'ಅಂದ-ಚಂದವಾಗಿದ್ದಾಳೆ' ಎಂದ್ರು ಮುಂತಾಗಿ ಮೆಚ್ಚಿ ಹೇಳಿದುದನ್ನು ನಾನೂ ಕೇಳಿದ್ದೇನೆ. ಹಿಂದೆ, ನನಗೆ ಮದುವೆಯಾದ ಆ ಕಾಲದಲ್ಲಿ 'ನಾನು ಬಹಳ ಸುಂದರಿ' ಎಂದು ನನಗೊಂದು ಹೆಮ್ಮೆಯೂ ಇತ್ತು. ಆ ಹೆಮ್ಮೆಗೆ ಈಗ ತಕ್ಕ ಪ್ರಾಯಶ್ಚಿತ್ತವಾಯಿತೆಂದ್ರು ಕೊಂಡು, ನಾನು ನನ್ನ ಅಂದ-ಚಂದಗಳನ್ನು ವಿಚಾರಿಸಿಕೊಳ್ಳುವುದನ್ನೆ ಬಿಟ್ಟುಬಿಟ್ಟಿದ್ದೆನು. ಆದರೂ ಆ ಸೌಂದರ್ಯವು ನನ್ನನ್ನು ಬಿಡದೆ ಹಾಗೆಯೇ

ಅಂಟಿಕೊಂಡಿರುವುದನ್ನು ನೋಡಿ ನನಗೆ ಆಶ್ಚರ್ಯವಾಯಿತು.

"ಮಾಲತಿ, ನೀನೊಬ್ಬಳು ಕವಯಿತ್ರಿಯ ಹಾಗೆ ನನ್ನನ್ನು ಬಣ್ಣಿಸಿಬಿಟ್ಟೆ. ನೀನು ಹೇಳವಂತೆ ನಾನು ದುಃಖಭಾಜನೆಯಾಗಿರುತ್ತಿದ್ದರೆ ಅಂದಗೆಟ್ಟು ಹೋಗಬೇಕಿತ್ತಲ್ಲವೆ? ಸಂತೋಷವಾಗಿದ್ದೇನೆಂದಾಯಿತಲ್ಲ? ಇನ್ನೇಕೆ ಇಂಥಾ ವಿಚಾರ?"

"ಓಹೋ! ಗಿರಿಜಾ! ಹಾಗೇ ಇರುವ ನಿನ್ನ ಈ ಸೌಂದರ್ಯವು ಸಂತೋಷದ ಗುರುತೆಂದು ನೀನನ್ನುವಿಯಾ? ಇಲ್ಲ ಗಿರಿಜಾ, ಇಲ್ಲ. ಇದು ವಸಂತಕಾಲದ ಮೇಲೆ ಕತ್ತಲೆಯೇ ಮುಸುಕಿದಂತಿದೆ. ಇದರ ಮೇಲೆ ಪ್ರಿಯಕರನೆಂಬ ರವಿಯು ಪ್ರೇಮದ ಬೆಳಕು ಬಿದ್ದಿತೆಂದರೆ ಆಗಿನ ಸೌಂದರ್ಯವೇ ಬೇರೆ! ಅದು ಅವರ್ಣನೀಯ! ಅನಿರ್ವಚನೀಯ!"

"ಅಬ್ಬಬ್ಬ! ಬಹಳ ಜಾಣೆಯೇ ಸರಿ ನೀನು ಮಾಲತೀ! ನಿನ್ನ ಈ ಬಗೆಯ ಮಾತುಕತೆಗಳೆಲ್ಲ ನನ್ನನ್ನೇನೋ ಗಾಳ ಹಾಕುವ ಹಾಗಿದೆ!"

"ಗಾಳವಲ್ಲ ಗೆಳತೀ! ಮೋಸದಿಂದ ಹಾಕಿ ಹಿಡಿಯುವಂಥಾದ್ದು ಗಾಳ. ಯುಕ್ತಾಯುಕ್ತ ವಿವೇಚನಾ ಪೂರ್ವಕವಾಗಿ ಹೇಳುವಂಥಾದ್ದು ಗಾಳವಲ್ಲ, ಹಿತೋಪದೇಶ."

"ಓಹೋ! ಅಂತೂ ನೀನು ನನಗೊಬ್ಬ ವರನನ್ನು ಗೊತ್ತುಮಾಡಿಯೇ ಇರುವ ಹಾಗಿದೆ?"

"ಅಷ್ಟೂ ತಿಳಿಯದಿದ್ದರೆ ನಿನ್ನನ್ನು ಪ್ರೌಢಳೆನ್ನಬಹುದೆ?"

"ಯಾರೋ ಅವರು?"

"ಯಾರೆಂದು ಕೂಡಾ ನೀನು ಊಹಿಸಿರಲಾರಿಯಾ?"

"ಅದು ಹೇಗಮ್ಮ ಊಹಿಸಲಿ?"

"ಒಬ್ಬನು ನಿನ್ನಂತಹ ವಧೂಮಣಿಯನ್ನೆ ವಿವಾಹವಾಡಿಕೊಳ್ಳುವೆನೆಂಬ ವ್ರತಧಾರಿಯಾಗಿರುವನೆಂದು ನಾನು ಹೇಳಿದ್ದೆನೋ ಇಲ್ಲವೊ?"

"ಆದರೆ?.....ಓ.....ಹೊ! ಅವರು? ನನ್ನಂತಹಳನ್ನು?"

"ಇದರಲ್ಲೇನಾಶ್ಚರ್ಯ ಗೆಳತೀ? ಶ್ರೀಮಂತರ ಮನೆಗೆ ಬಂದರೆ ನೀನೂ ಶ್ರೀಮಂತಳೇ ಆಗುವಿ."

ನಾನು ಬೆಪ್ಪಾಗಿ ಹೋದೆನು. ನನ್ನ ಮೌನವನ್ನು ನೋಡಿ ಅವಳು–
"ಏನಮ್ಮ ಯೋಚಿಸುವಿ? ನಿನ್ನ ತಂದೆಯೊಡನೆ ಈ ಪ್ರಸ್ತಾಪವನ್ನು ಹೇಗೆ

ಮಾಡುವುದೆಂದು ಯೋಚಿಸುವಿಯಾ? "

"ಅದೊಂದೂ ಇಲ್ಲ ಮಾಲತೀ. ಇದೆಲ್ಲ ನನಗೇನೋ ಅಸಂಭವನೀಯ ವಾಗಿಯೇ ಕಾಣುತ್ತದೆ ಗೆಳತಿ, ನೀನು ಹೇಗೆ ಈ ಅಸಂಭವನೀಯವಾದ ಪ್ರಸ್ತಾಪವನ್ನು ಮಾಡಿದಿಯೋ ನಾನೂ ಹಾಗೆಯೇ ನನ್ನ ಮನಸ್ಸಿನೊಳಗೆ ಇದುವರೆಗೆ ಯೋಚಿಸಿಕೊಂಡಿದ್ದ ಒಂದು ಅಸಂಭವನೀಯವಾದ ಪ್ರಸ್ತಾಪ ವನ್ನು ಈಗ ಮಾಡಲೆ? ಈಗ ನೀನಿಷ್ಟು ಹೇಳಿದುದರಿಂದಲೇ ನನಗೆ ಅದನ್ನು ಹೇಳುವ ಧೈರ್ಯವು ಬರುತ್ತದೆ "

"ಗಿರಿಜಾ, ನೀನು ನನ್ನನ್ನು ತೀರ ಪರಕೀಯಳಂತೆ ಭಾವಿಸುತ್ತಿ. ಅದೇ ಬೇಡೆನ್ನುವೆನು. ನಿನ್ನ ಯೋಚನೆಗಳನ್ನು ಆಗಿಂದಾಗಲೇ ನನಗೆ ತಿಳಿಸಿ ಬಿಡಬೇಕಿತ್ತು. ಏದದು? ಹೇಳು ಹೇಳು."

"ಮತ್ತೇನಿಲ್ಲ ಮಾಲತೀ, ಈಗ ನೀನು ಯಾವ ವರನನ್ನು ಕುರಿತು ಮಾತಾಡಿದಿಯೋ ಆ ವರನನ್ನು ಕುರಿತು ನಾನು ಇನ್ನೊಂದು ಯೋಚನೆಯಲ್ಲಿ ತಲ್ಲೀನಳಾಗಿದ್ದೆ. ನನ್ನ ಹೆತ್ತವರಿಗೂ ಇದನ್ನು ಹೇಳಲಿಲ್ಲ ನಾನು. ಈಗ ನಿನ್ನೊಡನೆ ಧೈರ್ಯ ಮಾಡಿ ಹೇಳುತ್ತಿದ್ದೇನೆ. ನನ್ನ ತಂಗಿ ಸರೋಜೆ ಈಗ ವಿವಾಹಕ್ಕೆ ಉಚಿತವಾದ ವಯಸ್ಸಿಗೆ ಬಂದಿದ್ದಾಳಷ್ಟೇ? ಅಂತಸ್ತು ಒಂದರಲ್ಲಿ ಹೊರತು, ಮಿಕ್ಕೆಲ್ಲದರಲ್ಲಿಯೂ ಅವಳು ಈ ವರರಿಗೆ ಒಪ್ಪುವ ವಧುವೆಂದು ನನಗೆ ತೋರುತ್ತಾಳೆ. ಕಲಾವಾಸನೆಯ ವಿಶೇಷಗುಣವೊಂದು ಅವಳಲ್ಲಿದೆ. ಸೌಂದರ್ಯದಲ್ಲಿ ಕೇಳಲೇ ಬೇಡವಷ್ಟೆ? ನನಗಿಂತಲೂ ಸುಂದರಿ."

"ಅದೆಲ್ಲ ಹೌದು ಗಿರಿಜಾ ನಿನ್ನದು ಶಾಂತಪ್ರಕಾಶವುಳ್ಳ ಸರಳ ಸೌಂದರ್ಯ; ಅವಳದು ಉಜ್ವಲವಾಗಿ ಪ್ರಕಾಶಿಸುವ ದಿವ್ಯಸೌಂದರ್ಯ. ನಿನ್ನನ್ನೂ ಅವಳನ್ನೂ ಒಟ್ಟಿಗೆ ನೋಡಿದರೆ, ಕೆಲವರು ನಿನ್ನನ್ನೆ ಹೆಚ್ಚಿನ ಸುಂದರಿ ಎಂದಾರು; ಕೆಲವರು ಸರೋಜೆಯನ್ನೆ ಹೆಚ್ಚಿನ ಸುಂದರಿಯೆಂದಾರು. ಅದು ಅವರವರ ಭಾವನೆಗಳಿಗೆ ಹೊಂದುವಂತಹದು. ಆದರೂ ಅವಳ ಸೌಂದರ್ಯ ದಲ್ಲಿ, ಕಂಡವರನ್ನು ಕೂಡಲೇ ಆಕರ್ಷಿಸಿ ಬಿಡುವಂತಹ ಒಂದು ಅದ್ಭುತಶಕ್ತಿ ಯುಂಟು; ನಿನ್ನಲ್ಲಿ ಆ ಶಕ್ತಿ ಅಡಗಿಕೊಂಡಿದೆ. ಗಿರಿಜಾ, ನಿನ್ನ ಈ ಯೋಚನೆ ಅಸಂಗತವಾದುದೇನೂ ಅಲ್ಲ; ಆ ವರನು ಮೊಟ್ಟಮೊದಲಿಗೆ ಮೆಚ್ಚಿ ಹೋದುದೂ ಸರೋಜೆಯನ್ನೆ! ಅವಳನ್ನು ನೋಡಿ ನೋಡಿ ಅವನು ನನ್ನೊ ಡನೆ ಏನು ಹೇಳಿದನು ಗೊತ್ತೆ? 'ಸಾಕ್ಷಾತ್ ಶಾರದೆ! ಅವಳನ್ನು ವರಿಸಿ

ಕೊಳ್ಳಬೇಕಾದರೆ ಪೂರ್ವ ಪುಣ್ಯವೇ ಬೇಕು' ಅಂದ. 'ಅಣ್ಣಾ, ನಿನ್ನಿಚ್ಛೆ ಯಿದ್ದರೆ ಆ ದಿವ್ಯಕನ್ಯೆಯನ್ನು ನಾನೇ ನಿನಗೆ ನಿಶ್ಚಯ ಮಾಡಿಸುತ್ತೇನೆ' ಎಂದು ಹೇಳಿದೆ. ಅಷ್ಟರಲ್ಲಿ ಅವನಿಗೆ ನಿನ್ನ ನೆನಪಾಯಿತು; ನಿನ್ನ ಚರಿತ್ರೆಯು ನೆನಪಾಯಿತು; ಅವನ ಪಂಥದ ನೆನಪಾಯಿತು. 'ಇಲ್ಲ ಮಾಲತಿ, ಸರೋಜೆ ಯನ್ನು ನಾನೆಂದೂ ವರಿಸಲಾರೆ. ಗಿರಿಜೆಯು ಕತೆಯನ್ನು ಕೇಳಿದಂದಿನಿಂದ ನನ್ನ ಮನಸ್ಸು ಅವಳ ಕಡೆಗೇ ಹರಿದುಹೋಗುತ್ತಿದೆ. ಅವಳು ಒಪ್ಪಿದರೆ ಅವಳನ್ನೆ ವಿವಾಹಮಾಡಿಕೊಂಡು ನನ್ನ ಪ್ರತಿಜ್ಞೆಯನ್ನು ಪಾಲಿಸಬೇಕೆಂದು ನನ್ನ ಅಂತರಾತ್ಮವು ಹೇಳುತ್ತದೆ. ಅವಳೂ ಸರೋಜೆಗಿಂತ ಏನೂ ಕಡಿಮೆ ಯವಳಲ್ಲ. ನವವಧುವಾದ ಸರೋಜೆಗೆ ಯೋಗ್ಯನಾದ ವರನು ದೊರೆಯು ವುದರಲ್ಲಿ ಏನೂ ಕಷ್ಟವಿಲ್ಲ. ಬೇಕಾದರೆ ಅವಳಿಗೆ ತಕ್ಕ ವರನನ್ನು ಗೊತ್ತು ಮಾಡುವ ಹೊಣೆಯೂ ನನಗೇ ಇರಲಿ ಕೃಷ್ಣಸ್ವಾಮಿ ಶಾಸ್ತ್ರಿಯವರ ಮಗ ಸೀತಾರಾಮನು ಒಳ್ಳೆಯ ತೇಜಸ್ವಿ; ರೂಪವಂತ; ಗುಣವಂತ. ಸರೋಜೆಗೆ ಒಪ್ಪುವಂತಹ ವಯಸ್ಸು. ಒಳ್ಳೆಯ ಸ್ಥಿತಿವಂತ ಕೂಡಾ ಈಗ ಎಂ. ಎ. ಕಲಿಯುತ್ತಿದ್ದಾನೆ. ನನಗೆ ಪ್ರಾಣ ಮಿತ್ರ. ಸರೋಜೆಯನ್ನು ಅವನಿಗೇ ಗೊತ್ತು ಮಾಡಬಹುದು. ಮೊದಲು ಗಿರಿಜೆಯು ಇತ್ಯರ್ಥವಾಗಲಿ' ಎಂದನು.

ಆಗ ನಾನಂದೆ— "ಓಹೊ! ನಿಮ್ಮಲ್ಲಿ ನಮ್ಮ ವಿಷಯವಾಗಿ ಬಹಳ ದೂರದವರೆಗೆ ಆಲೋಚನೆ ಹೋಗಿದೆಯಲ್ಲ!"

"ಅದಿರಲಿ, ಈಗ ನಿನ್ನ ಉತ್ತರವೇನು ಹೇಳು? ನನ್ನಣ್ಣನನ್ನು ವಿವಾಹ ಮಾಡಿಕೊಳ್ಳಲು ಒಪ್ಪುವಿಯಷ್ಟೇ?"

"ಇಲ್ಲ ಮಾಲತೀ, ಇಂಥ ಯೋಚನೆ ನನಗೆ ಈ ವರೆಗೂ ಬರಲಿಲ್ಲ."

"ಹಾಗಾದರೆ ಯೋಚನೆ ಮಾಡಿ ನಿಧಾನವಾಗಿ ಹೇಳು."

"ಅದೇ ನಾನು ಹೇಳಿದೆನಲ್ಲ ಮಾಲತಿ? ನನ್ನ ತಂಗಿಗೆ ಈ ವರನಾದರೆ ನನಗೆ ತುಂಬ ಸಂತೋಷವಿತ್ತು."

"ಅದೇ ನಾನು ಕೂಡಾ ಹೇಳಿಬಿಟ್ಟೆನಲ್ಲ?— ಸರೋಜೆಗೆ ಬೇರೆ ವರ ನನ್ನು ಗೊತ್ತುಮಾಡಿದ್ದೇವೇ ಅಂತ."

"ಆ ವರ ಅವಳಿಗೆ ಒಪ್ಪಿಗೆಯಾಗದಿದ್ದರೆ?"

"ಈ ವರನನ್ನು ಮಾತ್ರ ಒಪ್ಪಿರುವಳೆ?"

"ಅದಿನ್ನೂ ನಾನು ತಿಳಿದಿಲ್ಲ!"

"ಸರಿ, ನನ್ನ ಮಾತು ಕೇಳು. ನನ್ನಣ್ಣನು ತುಂಬ ದೃಢನಿಶ್ಚಯ ವುಳ್ಳವನು. ಇನ್ನು ಮಾಡಿಕೊಳ್ಳುವುದಾದರೆ ನಿನ್ನನ್ನು. ಇಲ್ಲದಿದ್ದರೆ ಬ್ರಹ್ಮಚಾರಿ!"

"ಅಯ್ಯೋ!"

"ಏನಾಯಿತು? ಯಾರು ಬ್ರಹ್ಮಚಾರಿ?"— ಎಂದು ಕೇಳುತ್ತ ಎಲ್ಲಿಗೋ ಹೊರಗೆ ಹೋಗಿದ್ದ ಸದಾಶಿವಂ ಆಗ ತಾನೇ ಒಳಗೆ ಬಂದು ಜಮ್ಮೆಂದು ಕುರ್ಚಿಯನ್ನು ಅಲಂಕರಿಸಿದರು.

ನನಗೇಕೋ ಬಹಳ ನಾಚಿಕೆಯಾಗಿ ಹೋಯಿತು. ಅವರನ್ನು ಮುಖ ವೆತ್ತಿ ನೋಡಲಾರದವಳಾಗಿ ತಲೆಯನ್ನು ತಗ್ಗಿಸಿದೆನು.

"ಬ್ರಹ್ಮಚಾರಿ. ನೀನೇ ಅಣ್ಣ. ನಿನ್ನ ವಿಷಯವಾಗಿಯೇ ನಡೆಯುತ್ತಿತ್ತು ಮಾತು" ಎಂದು ನಕ್ಕಳು ಮಾಲತಿ.

"ನನ್ನ ವಿಷಯವೆ?"

"ಹೌದಣ್ಣ. ನೀನು ಇವಳ ದ್ವಾರಾ ಬ್ರಹ್ಮಚರ್ಯಾಶ್ರಮದಿಂದ ಗೃಹಸ್ಥಾಶ್ರಮಕ್ಕೆ ಕಾಲಿಡಬೇಕೆಂದು ಯೋಚಿಸಿರುವಿಯಷ್ಟೇ? ಇದನ್ನೆ ಈಗ ಇವಳೊಡನೆ ಪ್ರಸ್ತಾಪಿಸುತ್ತಿದ್ದೆ."

"ಓಹೋ, ಹಾಗಾದರೆ ಈಗ ನಾನು ಬಂದುದು ಸರಿಯಾಗಲಿಲ್ಲ ವೆಂದಾ ಯಿತು." ಎಂದು ಎದ್ದರು ಸದಾಶಿವಂ.

"ಕೂಡಣ್ಣ ಕೂಡು. ಸರಿಯಾದ ಸಮಯಕ್ಕೆ ಬಂದಿರುವಿ. ಎಲ್ಲವೂ ಹೇಳಿಯಾಯಿತು. ಯೋಚನೆಮಾಡಿ ಹೇಳುವೆನೆಂದು ಪ್ರತ್ಯುತ್ತರವೂ ಸಿಕ್ಕಿದೆ"

"ನಾನು ಬರುತ್ತೇನೆ ಮಾಲತಿ,"— ನಾನು ಎದ್ದು ಹೊರಡಲನುವಾದೆ.

"ಹೌದು. ಗಂಟೆ ಎಂಟಾಯಿತು."— ಮಾಲತಿ ಹೋಗಲು ಅನು- ಮತಿ ಇತ್ತಳು.

ನಾನು ಅಲ್ಲಿಂದ ಸರೋಜೆ ಇರುವ ಪಕ್ಕದ ಕೋಣೆಯೊಳಗೆ ಹೊಕ್ಕೆನು. ಅವಳು ವಾಸಂತಿಗೇನೂ ಹೇಳಿಕೊಡದೆ, ಸುಮ್ಮನೆ ಕುಳಿತ ರೀತಿಯನ್ನು ನೋಡಿದಾಗ ನಮ್ಮ ಮಾತುಕತೆಗಳನ್ನು ಅವಳು ಕೇಳಿರಬೇಕೆನಿಸಿತು. ಕೇಳಿದ ರೇನು? ಅದೇನೂ ಅವಳು ಕೇಳಬಾರದಂತಹ ಕಳ್ಳಮಾತೇನೂ ಅಲ್ಲವಷ್ಟೆ?

೯

ಅಲ್ಲಿಂದ ನಾನೂ ಸರೋಜೆಯೂ ಮನೆಗೆ ಹೊರಟೆವು. ಮೈಲಾಪುರ

ದಿಂದ ತಿರುವಲ್ಲಿಕೋಣೆಗೆ ಹೋಗಬೇಕಾಗಿತ್ತು. ಬಸ್ಸಿನಲ್ಲಿ ಪಯಣಿಸಿಕೊಂಡಿದ್ದಾಗ. ಸರೋಜೆ ಕೇಳಿದಳು:— ಅದೇನು ವಿಷಯವಕ್ಕ? ಮಾಲತಿಯೂ ನೀನೂ ಏನೋ ಮಾತಾಡಿಕೊಂಡಿದ್ದಿರಲ್ಲಾ? ನನ್ನ ಹೆಸರೂ ಏಕೆ ಬಂತು?"

"ಎಲ್ಲಾ ಕೇಳಲಿಲ್ಲವೇ ನೀನು?"

"ಮೊದಲು ನಾನೇನೂ ಅಷ್ಟು ಗಮನಿಸಿಕೊಳ್ಳಲಿಲ್ಲ. ಸರೋಜ ಎಂಬ ಶಬ್ದವು ಕಿವಿಗೆ ಬಿದ್ದಮೇಲೆ ಗಮನವಿತ್ತೆ. ಆದರೂ ಸ್ಪಷ್ಟವಾಗಿ ಏನೂ ಅರ್ಥವಾಗಲಿಲ್ಲ. ಏನೋ ಸದಾಶಿವಂರವರು ನಿನ್ನನ್ನೆ ಮದುವೆ ಮಾಡಿಕೊಳ್ಳುವ ಆಲೋಚನೆಯಲ್ಲಿರುವಂತೆ ಮಾತ್ರ ಗೊತ್ತಾಯಿತು"

"ಹೌದೌದು. ನಾನು ಒಪ್ಪಿದರೆ?"

"ಒಪ್ಪಿದಿಯಷ್ಟೇ?"

"ಹುಚ್ಚೇ ನಿನಗೆ ಸರೋಜಾ? ನನ್ನ ಹೃದಯದಲ್ಲಿ ಬೇರೊಂದು ಇಚ್ಛೆಯುಂಟು. ಈ ವರೆಗೆ ನಿನಗೂ ಹೇಳಿಲ್ಲ. ನಿನಗೇ ಸದಾಶಿವಂ ವರನಾಗಬೇಕೆಂಬುದು ನನ್ನಿಚ್ಛೆ. ಇದನ್ನೂ ತಿಳಿಸಿದೆ ನಿನಗೂ ಒಬ್ಬ ಉತ್ತಮ ವರನನ್ನು ಅವರೇ ಗೊತ್ತುಮಾಡಿದ್ದಾರಂತೆ; ಅವರಿಗೆ ನಾನೇ ಆಗಬೇಕೆಂಬ ಆತುರವಿದೆಯಂತೆ! ಉಂಟೇ ಎಲ್ಲಿಯಾದರೂ?"

"ನೀನು ಒಪ್ಪಿಗೆ ಕೊಡಲಿಲ್ಲವೇ ಅಕ್ಕಾ?"

"ಇಲ್ಲವೇ ಇಲ್ಲ. ಈ ಹೊಸವಿಷಯವನ್ನು ಕುರಿತು ನಾನು ಕನಸಿನಲ್ಲಿಯೂ ಯೋಚಿಸಿದವಳಲ್ಲ!"

"ಅಕ್ಕ! ನೀನು ಅಗತ್ಯವಾಗಿ ಈ ಮದುವೆಗೆ ನಿನ್ನ ಒಪ್ಪಿಗೆ ಕೊಡು. ನನ್ನ ಮದುವೆ ವಿಚಾರ ಹಾಗಿರಲೀಗ. ನಿನ್ನ ಬಾಳುವೆಯೊಂದು ಸರಿಯಾದ ಸುಖದ ಹೆದ್ದಾರಿಗೆ ಹತ್ತಿತೆಂದರೆ ಅಷ್ಟೇ ಸಾಕು. ಮತ್ತೇನಿಲ್ಲ ಮತ್ತೆ. ಅಗತ್ಯವಾಗಿ ಒಪ್ಪು."

"ಏನೋ ನನಗೀ ಧೈರ್ಯವಾಗುವುದಿಲ್ಲ ತಂಗಿ."

"ನಾನೇ ಅಪ್ಪ–ಅಮ್ಮಂದಿರೊಡನೆ ಪ್ರಸ್ತಾಪಿಸುತ್ತೇನೆ ಹಾಗಾದರೆ?"

"ಈಗ ಬೇಡ. ತಡೆ"

ಆದರೆ ಸರೋಜ ತಡೆಯಲೇಯಿಲ್ಲ. ಈ ಗುಟ್ಟನ್ನು ತಾಯಿಯೊಡನೆ ಬಿಚ್ಚಿಯೇ ಬಿಟ್ಟಳು. ತಾಯಿ, ತಂದೆಯರಿಗೂ ತಿಳಿಸಿದ್ದಾಯಿತು. ಅವರಿಬ್ಬರೂ ತುಂಬ ಸಂತೋಷವನ್ನು ತೋರಿಸಿದರು. ಸದಾಶಿವಂರಂತಹ ಪ್ರಸಿದ್ಧ

ಪುರುಷರು ನನ್ನಂತಹ ದರಿದ್ರ ಹೆಂಗುಸಿನ ಸೌಭಾಗ್ಯವನ್ನು ಕಾಪಾಡಲು ಮುಂದೆಬರುವುದೆಂದರೆ ? ಇಷ್ಟು ಬೇಗನೇ ಇದು ಬಹಿರಂಗವಾದುದು ನನಗೇನೋ ಅಹಿತವಾಗಿಯೇ ತೋರಿತು. ಇದು ನಿಜವಾದೀತೇ ? ಏಕೆ ನಿಜವಾಗದು ? ಉದಾಹರಣೆಗಾಗಿ ಪ್ರತ್ಯಕ್ಷ ಮಾಲತಿಯೇ ಇದ್ದಾಳೆ! ಹೌದು, ಮಾಲತಿಯ ಹೊಸ ಬಾಳೂ, ಅದಕೊಪ್ಪುವ ಅವಳ ಸಲಹೆಗಳೂ ಯಥಾರ್ಥವೇ ಹೌದು ....... ಹುಟ್ಟಿದ್ದು ಬಾಳುವುದಕ್ಕಾಗಿ; ಬಾಳು ನಿಸರ್ಗದ ನಿಯಮಾನುಸಾರವಾಗಿ, ಸರಳ ರೀತಿಯಲ್ಲಿ ಸಾಗದಿದ್ದರ ಬದುಕಿ ಬಾಳಿ ಏನು ಸಾರ್ಥಕ ? ........ಆಹಾ! ಅತ್ಯಾಶ್ಚರ್ಯ: ನನ್ನ ಹೃದಯಕಾಸಾರದಲ್ಲಿ ಪ್ರೇಮವೆಂಬುದು ಬತ್ತಿಯೇ ಹೋಗಿತ್ತು. ಇನ್ನು ಹುಟ್ಟಲಿಕ್ಕೇ ಇಲ್ಲ, ಎಂದು ನಾನು ಭಾವಿಸಿಕೊಂಡಿದ್ದಲ್ಲಿ ಒಂದು ಹೊಸ ಸವಿಯ ಅನುಭವವೀಯುವ ಪ್ರೇಮದ ಒರತೆ ಮೆಲ್ಲಮೆಲ್ಲನೆಒಸರಿಸಲಾರಂಭವಾಗಿದೆ ! ಬಂಜರು ನೆಲದಂತಾಗಿದ್ದಲ್ಲಿ ಮತ್ತೆ ಸೊಗದಕಲ್ಪನೆಯ ಹಸುರು ಹುಲ್ಲಿನ ಮೊಳಕೆಯೊಡೆಯುತ್ತಿದೆ !

ಅನಂತರ ಪ್ರತಿದಿನದಂತೆ ಶಾಲೆಗೆ ಹೋಗಲಿಕ್ಕೂ ನನಗೊಂದು ಲಜ್ಜೆ. ಹಾಗೆಂದು ಶಾಲೆಗೆ ಹೋಗದಿರುವುದೆಂತು? ಕಾರಣವಿಲ್ಲದೆ ರಜೆ ತೆಗೆದುಕೊಳ್ಳುವುದು ಹೇಗೆ ?ಅಂತೆಯೇ ಶಾಲೆಗೆ ಹೋಗಿಬರುತ್ತಲೇ ಇದ್ದೆ. ಆ ಶಾಲೆಯಲ್ಲಿ ವಯಸ್ಸಿನಲ್ಲಿ ನನಗಿಂತಲೂ ದೊಡ್ಡವರಾದ ಮೂವರು ಅಧ್ಯಾಪಕಿಯರೂ ಬೇರಿದ್ದರು. ಅವರಿಗೆಲ್ಲ ನನ್ನ ಪುನರ್ವಿವಾಹದ ವಿಷಯ ತಿಳಿದಿರುವುದೇನೋ ಎಂದು ಸುಮ್ಮಸುಮ್ಮನೆ ನನಗೆ ತೋರಹತ್ತಿತು. ಯೋಚನೆ ಮಾಡಿದರೆ ಅವರಿಗೆಲ್ಲ ಏನೂ ಗೊತ್ತಿರಲಿಲ್ಲ ಅಂತೂ ಈ ಸಮಸ್ಯೆ ಬಗೆಹರಿದು ಹೋಗುವ ತನಕ ಮನಸ್ಸಿಗೊಂದು ಭಾರವೇ. ಈ ಮದುವೆ ಖಂಡಿತವಾದರೆ, ಎಲ್ಲಿಯೂ ಪ್ರಚಾರದಲ್ಲಿಲ್ಲದ ಅಪರೂಪದ ಮದುವೆಯೆಂದು, ಯಾರು ಯಾವ ರೀತಿಯಾಗಿ ಬೆರಳೆತ್ತಿ ತೋರಿಸುವರೋ ! ಅದರ ಹಿಂದೆಯೇ ಆ ಶಂಕೆಗಳನ್ನೆಲ್ಲ ಬೀಳಗೊಳಿಸುವ ಧೈರ್ಯದ ಆಲೋಚನೆಯ ಗಾಳಿಯಸುಳಿ. ಇದರೆಡೆಯಲ್ಲಿ ಎರಡು ಮೂರು ದಿನ ಮಾಲತಿಯ ಪ್ರಶ್ನೆಯಿಂದ ಹೇಗೋ ತಪ್ಪಿಸಿಕೊಂಡೆ. ನಾಲ್ಕನೇ ದಿನ "ಮಾಲತಿ, ನನಗೇನೂ ತೋರುವುದಿಲ್ಲ. ನೀನು ಹೇಗೆ ಹೇಳುವಿಯೋ ಹಾಗೆ" ಎಂದು ಅವಳಿಗೇ ಶರಣಾಗತಿ ಮಾದೆ.

"ನಿನ್ನ ಹೆತ್ತವರಿಗೆ ತಿಳಿಸಿದಿಯಾ ? ಏನಂದರು ?"

"ಅವರಿಗೇನೋ ಸಮ್ಮತಿಯಿರುವ ಹಾಗಿದೆ. ಇದಕ್ಕೆ ಕಾರಣವೂ

ಉಂಟು. ನನ್ನ ತಂದೆ ತಾಯಿಗಳು ಊರನ್ನು ಬಿಟ್ಟು ಬಂದವರು ಸಮಾಜದ ಕಟ್ಟುಪಾಡಿನ ಭೀತಿಯೇನೂ ಇವರಿಗಿಲ್ಲ. ಆದರೆ ಭೀತಿಯಿಲ್ಲವೆಂದು ಸಮಾಜದ ಕಟ್ಟುಪಾಡುಗಳನ್ನು ಮೀರುವುದು ಸರಿಯೆ ? ಎಂದು ನನಗೆನಿಸುತ್ತದೆ. ಎಷ್ಟಾದರೂ ನಿನ್ನಣ್ಣನಿಗೆ ಕೂಡಾ ಇದೊಂದು ಕಳಂಕ ತಾನೆ? " ಎಂದೆ ನಾನು. ಈ ಸಮಯದಲ್ಲಿ ನನ್ನ ಮನಸ್ಸಿನಲ್ಲಿ ಒಂದು ಯುದ್ಧವೇ ಪ್ರಾರಂಭವಾಗಿತ್ತು. ತನ್ನ ಸ್ವತ್ವಾಧಿಕಾರದ ಮೇಲೆ ಅನ್ಯಾಕ್ರಮಣವಾಗುವುದನ್ನು ನೋಡಿ, ನನ್ನ ಪತಿ ವೆಂಕಟೇಶರ ಯೋಚನೆ ದಾಳಿಮಾಡಲಾರಂಭಿಸಿತ್ತು. ತಂದೆ ಅವರನ್ನು ಪೋಲೀಸಿಗೆ ಹಿಡಿಸಬೇಕೆಂದಾಗ, ತಾಯಿ 'ಏನೂ ಬೇಡ. ಮುಂದೆ ದೇವರು ದಯಮಾಡಿದರೆ ಒಳ್ಳೇ ಬುದ್ಧಿ ಬಂದೀತು' ಎಂದು ಹೇಳಿದ್ದೂ ಈಗ ನೆನಪಾಯಿತು. ಅವಳ ಮಾತಿನಂತೆಯೇ ದೇವರ ದಯವೇ ಆಗಿ, ನನ್ನನ್ನು ಮುಟ್ಟಿ ತಾಳಿಕಟ್ಟಿದ ಅವರು ಯೋಗ್ಯಪರಿಸ್ಥಿಗೆ ಮುಟ್ಟಿ, ನನ್ನನ್ನು ಕರೆಯಲಿಕ್ಕೆ ಬಂದಾರೋ ? ಆಗ ಈ ಮದುವೆ ಪಶ್ಚಾತ್ತಾಪಕ್ಕೆ ಕಾರಣವಾದೀತೊ ? ಆದರೆ ಈ ಮನದೊಳಗಿನ ಜಂಜಾಟವನ್ನು ಮಾಲತಿಗೆ ಹೇಳಲೆಂತು ?

"ಇದೆಲ್ಲ ವ್ಯರ್ಥ ಸಂದೇಹ. ನೀನು ಧೈರ್ಯದಿಂದ ಈ ಮದುವೆಗೆ ಒಪ್ಪು" ಎಂದು ಒಳದನಿಯೊಂದು ನಿರ್ಧಾರವಾಗಿ ಹೇಳಿದಂತಾಯಿತು

ಮಾಲತಿಯೆಂದಳು— "ಅಷ್ಟೇ ತಾನೇ ಗಿರಿಜಾ, ಅದೆಲ್ಲವೂ ಸರಿ ಹೋಗುತ್ತದೆ. ಕಳಂಕ-ಗಿಳಂಕ ಎಂಬುದೆಲ್ಲವೂ ಈ ವಿಷಯದಲ್ಲಿ ಬರಿಯ ಮಾತು. ಬಾ. ನನ್ನಣ್ಣನು ಈ ದಿನ ನಿನ್ನೊಡನೆ ಮಾತಾಡಬೇಕೆಂದಿದ್ದಾನೆ. ಕರೆದುಕೊಂಡು ಬರಲೇಬೇಕೆಂದಿದ್ದಾನೆ. ಬಾ"

ಸಂಜೆ ಶಾಲೆ ಬಿಡುವ ಸಂದರ್ಭದಲ್ಲಿ ಈ ಮೇಲಿನ ಮಾತುಕತೆ ನಡೆಯಿತು. ನಾನು ಹಾರಿಬಿದ್ದು— "ಏಕೇಕೆ ?"

"ಪ್ರೌಢವಿವಾಹದ ಕ್ರಮ ಹೀಗಿದೆ ಗಿರಿಜಾ. ವಧೂ-ವರರು ಪರಸ್ಪರ ಮಾತಾಡಿಕೊಂಡೇ ನಿಶ್ಚಯವಾಗಬೇಕಿದು. ನಾನು ಮೊನ್ನೆ ನಿನಗೆಲ್ಲ ಹೇಳಿದ್ದೇನೆ. ಇನ್ನು ನೀವು ನೀವೇ ನಿಶ್ಚಯ ಮಾಡಿಕೊಂಡಮೇಲೆಯೆ ಉಳಿದವರ ಕೆಲಸ."

"ಅಯ್ಯೋ 'ಅಯ್ಯೋ' ನಾನೇನು ಮಾತಾಡಲಮ್ಮಾ ಅವರೊಡನೆ ? "

"ಅಕೋ ಈ ಲಜ್ಜೆಯೇ ಬೇಡಾನ್ನೋದು. ಈ ಲಜ್ಜೆ-ಸಂಕೋಚಗಳ

ಅತಿರೇಕದಿಂದಲೇ ಭಾರತ ಸಹೋದರಿಯರು ಹೆಚ್ಚಾಗಿ ದುಃಖಭಾಜನರಾಗುತ್ತಾರೆ. ಮದುವೆಯಂತಹ ಮಹತ್ವದ ವಿಷಯದಲ್ಲಿ ಲಜ್ಜೆಯನ್ನು ಹೊರಕ್ಕೆ ಬರಗೊಡಬಾರದು. ನಿನಗೆ ಇಷ್ಟವಿದ್ದರೆ ಸರಿ ಎನ್ನು; ಇಲ್ಲದಿದ್ದರೆ ಇಲ್ಲವೆನ್ನು" ಹೀಗೆಂದು ನನ್ನ ಕೈಹಿಡಿದು ಬಲವಂತದಿಂದ ಎಳೆದುಕೊಂಡು ಮನೆಗೆ ಕರೆದುಕೊಂಡು ಹೋದಳು.

ಸರೋಜೆ ಈ ಮೊದಲೇ ಅಲ್ಲಿಗೆ ಹೋಗಿ ಟ್ಯೂಶನ್ನಿಗೆ ಪ್ರಾರಂಭ ಮಾಡಿದ್ದಳು.

ಮಾಲತಿ ನನ್ನನ್ನು ಮಾಳಿಗೆಯ ಮೇಲೆ ಕೈಬಿಡದೆ ಕರೆದೊಯ್ದು, ಸದಾಶಿವಂರವರ ಖಾಸಗೀ ಕೋಣೆಯೊಳಗೆ ಹೊಕ್ಕಳು. ನನ್ನನ್ನು ಯಾವುದೋ ಒಂದು ಶಕ್ತಿ, ಹಿಂದಕ್ಕೆ ಎಳೆಯುತ್ತಾ ಇರಲು, ಅವಳ ಬಲವಂತವು ನನ್ನನ್ನು ಅವಳೊಂದಿಗೇ ಕರೆದೊಯ್ದಿತು.

ಯಾವುದೋ ಒಂದು ಪುಸ್ತಕವನ್ನು ಓದುತ್ತಿದ್ದ ಸದಾಶಿವಂ, ಪುಸ್ತಕವನ್ನು ಮಡಚಿ,— "ಬನ್ನಿ ಗಿರಿಜಾಬಾಯಿ; ಕೂಡಿ, ಸಂಕೋಚಪಡಬೇಡಿ" ಎಂದು ನನ್ನನ್ನು ಸ್ವಾಗತ ಮಾಡಿದರು.

"ಅಣ್ಣ! ನೀನಂದಂತೆ ಕರೆತಂದಿದ್ದೇನೆ. ಮಾತಾಡಿಕೊಳ್ಳಿರಿ" ಎಂದು ಮಾಲತಿ ನನ್ನನ್ನು ಅವರಿದುರು ಕುರ್ಚಿಯಲ್ಲಿ ಒತ್ತಿಕೂಡಿಸಿ, ಹೊರಡಲನುವಾದಳು.

"ನೀನೇಕೆ ಹೋಗುತ್ತಿ ಮಾಲತಿ? ಏನು ಮಾತಿದ್ದರೂ ನಿನ್ನೆದಿರೇ ಸಾಗಲಿ" ಎಂದೆ ನಾನು ಬಹು ಕಷ್ಟದಿಂದ.

"ಹಾಗಲ್ಲ ಗೆಳತೀ, ವಧೂವರರ ಸಮ್ಮತಿ ಏಕಾಂತದಲ್ಲಿ ಆದರೇನೇ ಮಹತ್ವ ಹೆಚ್ಚು. ಹೃತ್ಪೂರ್ವಕವಾದ ಅಭಿಪ್ರಾಯ ಪ್ರಕಟನೆಗೆ ಆಗಲೇ ಅನುಕೂಲ. ಗಿರಿಜಾ, ಒಂದು ವಿಷಯ ನೀನು ಗಟ್ಟಿಯಾಗಿ ನಂಬು; ನನ್ನಣ್ಣನು ಮರ್ಯಾದೆಯ ಎಲ್ಲೆಯನ್ನು ರವಷ್ಟೂ ಮೀರುವವನಲ್ಲ" ಎಂದಂದು ಮಾಲತಿ ಹೋಗಿಯೇ ಬಿಟ್ಟಳು.

ಎಲ್ಲಿ ಬಾಗಿಲು ಹಾಕಿಬಿಡುತ್ತಾಳೋ ಎಂದು ನಾನು ಅಂಜಿದೆ. ಪುಣ್ಯಕ್ಕೆ ಹಾಗೆ ಮಾಡಲಿಲ್ಲ.

ಈಗ ಅಲ್ಲಿ ನಾವಿಬ್ಬರೇ ಆದೆವು. ಅವರ ಮುಖವನ್ನು ನೋಡಲು ನನಗೆ ಧೈರ್ಯವಿಲ್ಲ. ಅವರೇ ಮಾತಾಡತೊಡಗಿದರು :— "ಗಿರಿಜಾಬಾಯಿ,

ನಿಮ್ಮನ್ನು ಏಕಾಂತಕ್ಕೆ ಬರಮಾಡಿಕೊಂಡುದಕ್ಕೆ ನನ್ನ ಮೇಲೆ ಕೋಪ ವಿದೆಯೆ ? "

" ಕೋಪವೇಕೆ ? "

" ಒಳ್ಳೆಯದು, ಮೊದಲು ನಾನು ನಿಮಗೊಂದು ಅಭಯುವನ್ನು ಕೊಡು ತ್ತೇನೆ. ನಿಮ್ಮಂಥ ತರುಣಿಯನ್ನು ನನ್ನಂಥ ಯುವಕನು ಏಕಾಂತದಲ್ಲಿ ಸಂಧಿಸುವುದು ಹೊರನೋಟಕ್ಕೆ ತಪ್ಪೆನಿಸುವುದೆಂದು ನಾನು ಬಲ್ಲೆನು. ನಾನು ನ್ಯಾಯವಾದ ವಿವಾಹಸಂಬಂಧಕ್ಕೆ ಸಿದ್ಧವಾಗಿರುವುದರಿಂದ ಈ ತಪ್ಪು ಕ್ಷಮ್ಯ. ವಾದೀತೆಂದು ಭಾವಿಸುವೆನು. ನನ್ನಿಂದ ನಿಮ್ಮ ನಾರೀ ಧರ್ಮಕ್ಕೆ ತಿಲ- ಮಾತ್ರವೂ ಬಾಧೆಬರಲಿಕ್ಕಿಲ್ಲವೆಂದು ನೀವು ದೃಢವಾಗಿ ನಂಬಿ ನನ್ನೊಡನೆ ಮಾತಾಡಬೇಕು. ಸಂದೇಹವೇನಾದರೂ ಇದೆಯೆ ? "

" ಇಲ್ಲ. ಸಂದೇಹವೇಕೆ ? "

" ಒಳ್ಳೆಯದು. ನಿಮ್ಮ ಎಲ್ಲ ಚರಿತ್ರೆಯನ್ನೂ ನಾನು ತಿಳಿದಿರುವೆನು. ಈಗ ನೀವು ಗಂಡನ ಸಂಬಂಧವನ್ನು ಬಿಟ್ಟು ಮೂರು ವರ್ಷವಾಯಿತಷ್ಟೆ ? ಇನ್ನೆಲ್ಲಾದರೂ ಅವರ ಭರವಸೆ ನಿಮಗಿದೆಯೆ ? "

" ಅದಿ........ಲ್ಲ "

" ಒಂದು ವೇಳೆ ಕರೆಯಲಿಕ್ಕೆ ಬಂದರೆ ಆಗೇನು ಮಾಡುವಿರಿ ? "

ಆ ನಂಬುಗೆ ಹೋಯಿತು. ಒಂದು ವೇಳೆ ಬಂದರೂ ಅವರೊಡನೆ ಬಾಳಿಯೇನೆಂಬ ನಂಬುಗೆಯೂ ಇನ್ನಿಲ್ಲ. "

" ಹಾಗಾದರೆ ಮೊದಲಿನ ವಿವಾಹವನ್ನು ವಿರಹಿತ ಪಡಿಸಲು ನೀವು ಸಿದ್ಧರಿರುವಿರೆಂದಾಯಿತು. "

" ಹೌದು. ಆದರೆ ನಮ್ಮ ಜಾತಿಗೆ ಆ ಕಾನೂನು ಇಲ್ಲವಷ್ಟೆ ? "

" ಇಲ್ಲದೇನು ? ಹಿಂದೂಧರ್ಮದಲ್ಲಿ ಎಲ್ಲವೂ ಇದೆ. ನೀವು ಪುನರ್ವಿ ವಾಹಕ್ಕೆ ಸಮ್ಮತಿಸುವಿರಷ್ಟೆ ? "

ನಾನೇನೂ ಮಾತಾಡಲಿಲ್ಲ.

" ಮಾಲತಿ ನಿಮಗೆಲ್ಲಾ ತಿಳಿಸಿದ್ದಾಳೆಯೆ ? "

" ಹುಂ "

" ಹಾಗಾದರೆ ಸಂಕೋಚ ಪಡದೆ ಹೇಳಿರಿ. ನಾನೋ ಮನಃಪೂರ್ವಕ ವಾಗಿ ವಿಧಿಪ್ರಕಾರ ನಿಮ್ಮನ್ನು ವರಿಸಕೊಳ್ಳಲು ಸಿದ್ಧನಾಗಿದ್ದೇನೆ ಕೇವಲ

ಕರುಣೆಯಿಂದ ಹೀಗೆ ಸಿದ್ಧನಾಗಿರುವೆನೆಂದಲ್ಲ. ನಿಮ್ಮ ಮೇಲೆ ನನಗೆ ತುಂಬಾ ಪ್ರೇಮವೇ ತುಂಬಿಬಂದಿದೆ. ನೀವು ನನ್ನ ಸಹಧರ್ಮಿಣಿಯಾದರೆ ನಾನು ಧನ್ಯನೆಂದು ಭಾವಿಸುವೆನು."

"ಆದರೆ ತಮಗೆ ನನ್ನಿಂದ ಎಂದೆಂದಿಗೂ ಮಾಯದಂತಹ ಕಳಂಕ...."

"ಕಳಂಕವೆಂದು ಬಾಯಿಯಿಂದ ಹೇಳಿದ ಮಾತ್ರಕ್ಕೆ ಕಳಂಕವಾಗಲಾರದು. ಆ ಭಯವೇ ನನಗಿಲ್ಲ. ಹಾಗೊಂದು ವೇಳೆ ಏನಾದರೂ ಇದ್ದರೂ ಅದಕ್ಕೆ ತಕ್ಕ ಪ್ರಾಯಶ್ಚಿತ್ತ ಮಾಡಿದರಾಯಿತು. ನೀವು ಮನಃಪೂರ್ವಕವಾಗಿ ನನ್ನ ಮೇಲೆ ಪ್ರೇಮವನ್ನಿಟ್ಟು ಒಪ್ಪಿದರೆ ಸಾಕು."

"ಆದರೆ ನನ್ನ ಕೋರಿಕೆ ಬೇರೆಯಾಗಿತ್ತು........"

"ಗೊತ್ತಿದೆ. ಅದನ್ನೂ ಮಾಲತಿ ನನಗೆ ಹೇಳಿದ್ದಾಳೆ. ನನ್ನ ಯೋಚನೆಯ ವಿಧಾನವನ್ನೂ ಮಾಲತಿ ನಿಮಗೆ ಹೇಳಲಿಲ್ಲವೇ?"

"ಹೇಳಿದ್ದಾಳೆ."

"ಸರಿ. ಆ ಪ್ರಸ್ತಾಪ ಬದಿಗಿರಲಿ. ನನ್ನ ಗೆಳೆಯ ಸೀತಾರಾಮನು ಇನ್ನು ಆರು ತಿಂಗಳು ಮದುವೆಗೆ ಸಿದ್ಧನಾಗಲಾರ. ಇಲ್ಲದಿದ್ದರೆ ನಮ್ಮ ಹಾಗು, ನಿಮ್ಮ ತಂಗಿಯ ಮದುವೆ ಒಂದೇ ದಿನದಲ್ಲಿ ಜರುಗಿಸಿಬಿಡಬಹುದಿತ್ತು!"

"ಆಹಾ! ನಮ್ಮಂತಹ ದೀನರಿಗಾಗಿ ತಾವೆಷ್ಟು ವಿಚಾರ ಮಾಡುವಿರಿ?"

"ಎಲ್ಲವೂ ನಿಮ್ಮ ಗುಣರೂಪಾಕೃತಿಯ ಮಹಿಮೆ. ದೇವರ ದಯದಿಂದ ಇದಕ್ಕೆ ನಿಮ್ಮ ಹೆತ್ತವರ ಆಕ್ಷೇಪಣೆಯಿಲ್ಲದಿರುವುದು ಒಂದು ವಿಶೇಷವೇ ಆಗಿದೆ. ಸಾಧಾರಣವಾಗಿ ಇಂತಹ ಹೊಸ ಕಾರ್ಯಗಳಿಗೆಲ್ಲಾ ಅವರವರ ಹೆತ್ತವರೇ ಮಾರಕರಾಗುವುದು ವಾಡಿಕೆ ನನ್ನ ತಂಗಿ ಮಾಲತಿಗೂ ಹೆತ್ತವರಿಂದಲೇ ದುರ್ಗತಿಯೊದಗಿತು ಬಲು ಧೈರ್ಯದಿಂದ ನಾನು ಅವಳನ್ನು ಒಂದು ಆಧಾರಕ್ಕೆ ಹೊಂದಿಸಿ ನಿಲ್ಲಿಸಿದೆ. ನೋಡಿದಿರಾ ಈಗ ಅವಳೆಷ್ಟು ಸುಖ ಸಂತೋಷದಿಂದಿದ್ದಾಳೆ?"

ಹೀಗೆಂದು ಅವರು ನೆಟ್ಟದೃಷ್ಟಿಯಿಂದ ನನ್ನ ಮುಖವನ್ನೆ ನೋಡತೊಡಗಿದರು ನನ್ನ ದೃಷ್ಟಿಯೂ ಅವರ ದೃಷ್ಟಿಯನ್ನಿದಿರಿಸಿತು.

ಪುನಃ ಅವರೇ ಕೇಳಿದರು:— "ಇನ್ನೂ ನಿಮ್ಮ ಸಮ್ಮತಿ ಹೇಳಲೇ ಇಲ್ಲ."

"ಇನ್ನೇನು ಹೇಳಲಿ ನಾನು?"

" ನನ್ನನ್ನು ವಿವಾಹವಾಗಲು ನಿಮ್ಮ ಸಮ್ಮತಿಯೆ ? "

" ದಯಮಾಡಿ ನನ್ನನ್ನು ಬಹುವಚನದಲ್ಲಿ ಸಂಬೋಧಿಸಬೇಡಿ. "

" ಒಳ್ಳೇದು. ಸ್ವಕೀಯ ಭಾವನೆಗೆ ಏಕವಚನವೇ ಸರಿ. ಗಿರಿಜಾ! ಹೇಳು ಹಾಗಾದರೆ. ಸಮ್ಮತಿಯೆ ? "

ಲಜ್ಜೆ ಸಾರಿಬಂದು ನನ್ನ ಮುಖವನ್ನು ತಡವಿತು. ಅದರ ಮೇಲೆ ಮುಗುಳ್ನಗುವೂ ಏಳುತ್ತಿತ್ತು.

" ಗಿರಿಜಾ, ನೀನು ಸಮ್ಮತಿ ಎಂದರೆ ಸಾಕು. ಮುಂದಿನ ಎಲ್ಲ ಕಾರ್ಯಗಳನ್ನೂ ನಾನೇ ನೋಡಿಕೊಳ್ಳುತ್ತೇನೆ. ನಿನ್ನ ತಂದೆಯ ಬಳಿಗೆ ನಾನೇ ಬಂದು ಮಾತಾಡುತ್ತೇನೆ. "

" ನೀವೇ ಏಕೆ ಬರಬೇಕು? ನೀವು ಒಂದು ಸುದ್ದಿ ಕಳುಹಿಸಿದರೆ ತಂದೆಯೇ ನಿಮ್ಮ ಬಳಿಗೆ ಬರುವರು. "

" ಅದು ಮರ್ಯಾದೆಯಲ್ಲ ಗಿರಿಜಾ. ಯಾವಾಗಲೂ ಗಂಡಿನವರು ಹೆಣ್ಣಿನವರ ಮನೆಗೆ ಹೋಗಿ ಮಾತಾಡಬೇಕಲ್ಲದೆ, ಬಲ್ಲಿದರು ಬಡವರೆಂಬ ತಾರತಮ್ಯದಿಂದ ವರ್ತಿಸುವುದು ಅಗೌರವವಾಗಿದೆ ಅದೆಲ್ಲ ನಾನು ನೋಡಿ ಕೊಳ್ಳುವೆನು. ಈಗ ಏಕಾಂತದಲ್ಲಿ ನಿನ್ನ ಹೃತ್ಪೂರ್ವಕವಾದ ಸಮ್ಮತಿ ಯನ್ನು ತಿಳಿಸು. "

" ಇನ್ನು ಹೇಗೆ ಅದನ್ನು ನಾನು ತಿಳಿಸಲಿ ? "

" ಅಂದರೆ ಭಾವನೆಯ ಮೂಲಕವಾಗಿ ತಿಳಿಸಿಯಾಯಿತೆನ್ನುವಿಯಾ? ಹೌದು. ಹೃತ್ಪೂರ್ವಕವಾದ ಸಮ್ಮತಿ ಭಾವನೆಯಿಂದಲೇ ವ್ಯಕ್ತವಾಗು ವಂತಹದು. ಆದರೂ ಬಾಯಿಯಿಂದ ಒಂದು ಮಾತು ಹೇಳಿದರೆ ನಾನು ತೃಪ್ತನಾದೇನು. ಒಪ್ಪುವಿಯಾ ಗಿರಿಜಾ?—" ಅವರು ಬಾಗಿ ನನ್ನ ಕೈಯನ್ನು ಹಿಡಿದರು.

ಆ ಸ್ಪರ್ಶದಿಂದ ನನ್ನ ಮೈಯೆಲ್ಲ ಜುಮುಗುಟ್ಟಿಹೋಯಿತು. ಆ ಜುಮುಗುಡುವಿನಲ್ಲಿ ಅನಿರ್ವಚನೀಯವಾದೊಂದು ಸವಿಯ ಅನುಭವವೂ ಇತ್ತು. " ಒಪ್ಪಿಗೆ ತಾನೆ? " ಎಂದು ಮತ್ತೊಮ್ಮೆ ಕೇಳಿದರು. "ಒಪ್ಪಿಗೆ" ಎಂದು ನನ್ನ ಗಂಟಲಲ್ಲಿ ಸಿಕ್ಕಿಕೊಂಡಿದ್ದ ಮಾತು ಜಾರಿ ಕೆಳಗೆ ಬಿತ್ತು.

" ಆಹಾ! ನೆಮ್ಮದಿಯಾಯಿತೀಗ! ಗಿರಿಜಾ! ಇದನ್ನು ನೀನು ಸಾಮಾನ್ಯವಾದ ಮದುವೆಯೆಂದೆಣಿಸಬೇಡ. ಇದು ಶ್ರೇಷ್ಠವಾದ ಪ್ರೇಮ

ವಿವಾಹವೆಂದು ತಿಳಿ" ಎಂದು ಅವರು ನನ್ನ ಕೈಯನ್ನು ಬಿಟ್ಟರು.

"ಇನ್ನು ಬರುತ್ತೇನೆ ನಾನು" ಎಂದು ನಾನೆದ್ದೆನು. ಅವರೂ ಎದ್ದರು ನನ್ನ ಹಿಂದೆಯೇ ಅವರೂ ಕೆಳಗಿಳಿದರು. ಆಗ ಕೆಳಗೆ ಸರೋಜೆಯೂ ಮಾಲತಿಯೂ ಇದಿರುಬದಿರಾಗಿ ಕುಳಿತುಕೊಂಡು ಮಾತಾಡುತ್ತಿದ್ದರು. ನಮ್ಮನ್ನು ನೋಡುತ್ತಲೇ ಇಬ್ಬರೂ ಎದ್ದರು. ಮಾಲತಿ— "ಏನಣ್ಣ? ಹಣ್ಣೊ ಕಾಯೊ?" ಎಂದು ಕೇಳಿದಳು. "ಇವಳನ್ನೇ ಕೇಳು" ಎಂದರು ಸದಾಶಿವಂ. ಮಾಲತಿ ನನ್ನ ಕೈಯನ್ನು ಹಿಡಿದು —"ಏನಾಯಿತೇ ಗಿರಿಜಾ! ಒಹೊ! ಮುಖಾರವಿಂದವು ಪ್ರೇಮಾರುಣ ಪ್ರವಾಹದಿಂದ ಕೆಂಪೇರಿರುವುದಲ್ಲ! ತಿಳಿಯಿತಿನ್ನು!" ಎಂದು ನಕ್ಕಳು.

"ಆದರೂ ಬಹಳ ಜೋರಿದ್ದಿ ನೀನು ಮಾಲತೀ—" ಎಂದು ನಾನು ಅವಳನ್ನು ದೂಡಿದ ಹಾಗೆ ಮಾಡಿ, "ಸರೋಜ, ಬಾರೇ ಹೋಗೋಣ" ಎಂದು ಹೊರಡಲುಜ್ಜುಗಿಸಿದೆನು.

"ಅಬ್ಬಾ! ಈಗಲೇ ನನ್ನನ್ನು ದೂಡಿ ಮಾಡಿ ಹೇಗೆ ಅಧಿಕಾರಕ್ಕೆ ಪ್ರಾರಂಭಿಸಿಬಿಟ್ಟಳು! ಇನ್ನೂ ಗಂಟೆ ಎಂಟಾಗಿಲ್ಲ. ಸರೋಜೆಯನ್ನು ಕರೆಯುತ್ತಾಳಲ್ಲ!" ಮಾಲತಿಯೆಂದಳು

"ಸರೋಜೆ ವಾಸಂತಿಗೆ ಹೇಳಿಕೊಡುವದನ್ನು ಬಿಟ್ಟು ಸುಮ್ಮನಿರುವಳಲ್ಲಾಂತ ಕರೆದೆ"— ನಾನಂದೆ

"ನೀನು ಉಪ್ಪರಿಗೆಯ ಮೇಲೆ ಮಾತಾಡಲಿಕ್ಕೆ ಹೋದದ್ದು ನೋಡಿ ಸರೋಜೆಗೆ ಕುತೂಹಲದಿಂದ ಪಾಠವೇ ಮುಂದೆ ಸಾಗದಾಯಿತು ಪಾಪ. ಸರೋಜಾ! ನೀನು ನಿನ್ನಕ್ಕನ ಈ ಪ್ರೇಮವಿವಾಹವನ್ನು ಕುರಿತು ಒಂದು ಚೆಲೋ ಕಾವ್ಯವನ್ನು ಬರೆಯಬೇಕು ಮತ್ತೆ! ಎಂದಳು ಮಾಲತಿ.

ಸರೋಜೆ ನನ್ನ ಮುಖನೋಡಿ ನಕ್ಕಳು.

## ೧೦

ಅಲ್ಲಿಂದ ಮನೆಗೆ ಮರಳುವಾಗ ನಾನು ಮಾತಾಡದೆ ಗಂಭೀರವಾಗಿದ್ದುದರಿಂದಲೋ ಏನೋ, ಸರೋಜೆಯೂ ಏನೂ ಮಾತಾಡಲಿಲ್ಲ. ಈ ಮೌನವು ನನಗೇನೋ ಒಂದು ಅಸಮಾಧಾನಕರವಾಗಿಯೇ ಇತ್ತು. ಬಸ್ಸು ಅರ್ಧ ದೂರ ಸಾಗುತ್ತಿದ್ದಾಗ ನಾನೇ ಮೌನವನ್ನು ಭಂಗಿಸಿದೆ— "ಸರೋಜ, ಇವತ್ತು ನಡೆದ ವಿಶೇಷವೆಲ್ಲ ನಿನಗೆ ಗೊತ್ತಾಗಿದೆಯೇನೆ?"

" ಗೊತ್ತಿದೆ ಅಕ್ಕ, ಮಾಲತಿ ಅಂದಳು. ನೀನೂ ಅವರೂ ಮಾತಾಡಿ ಒಪ್ಪಿಕೊಂಡಿರಿ ತಾನೇ ? "

" ಹೂಂ. ನಿನಗಿದು ಸಮ್ಮತಿಯೇ ಸರೋಜ ? "

" ಅದೇನಕ್ಕ ಹಾಗೆ ಕೇಳುತ್ತಿ ? ನಿನ್ನ ಸೌಭಾಗ್ಯವು ಬೆಳಗುವುದು ನನಗೆ ತುಂಬ ಸಂತೋಷವಲ್ಲವೇನಕ್ಕ ? ತಂದೆಯೊಡನೆ ಹೇಳಿ ಮುಂದಿನ ಏರ್ಪಾಡಿಗೆ ತೊಡಗಬಹುದಷ್ಟೇ ? "

" ನೀನು ಸುಮ್ಮನಿರು ಸರೋಜ. ಎಲ್ಲ ಅವರೇ ನೋಡಿಕೊಳ್ಳುತ್ತಾರಂತೆ. ನಾಳೆ-ನಾಡಿದರಲ್ಲಿ ಅವರೇ ನಮ್ಮನೆಗೆ ಬಂದಾರು."— ಹೀಗೆ ಮಾತಾಡಿಕೊಂಡು ನಾವು ಮನೆಗೆ ಬಂದು ಸೇರಿದೆವು

ಮರುದಿನ ನಾನು ಶಾಲೆಯಿಂದ ಹೊರಟು ಬರುವಾಗ, ಸದಾಶಿವಂ ಸಂಧಿಸಿ,— " ಗಿರಿಜಾ ನಾಳೆ ಆದಿತ್ಯವಾರ, ಮಧ್ಯಾಹ್ನದ ಮೇಲೆ ನಾನೂ ಇನ್ನೊಬ್ಬರೊಂದಿಗೆ ನಿಮ್ಮಲ್ಲಿಗೆ ಬರುತ್ತೇವೆ. ನಿನ್ನ ತಂದೆ ಮನೆಯಲ್ಲಿರುವರಷ್ಟೆ ? " ಎಂದರು "ಇರುವರೆ"ಂದು ನಾನಂದೆ

ಮನೆಗೆ ಬರುವ ಶ್ರೀಮಂತ ಅತಿಥಿಗಳಿಗೆ ಯೋಗ್ಯವಾದ ಉಪಚಾರ ಮಾಡಬೇಡವೆ ? ಅದಕ್ಕೆಲ್ಲ ಸರೋಜೆಯೇ ಮುಂದಾದಳು. ತಂದೆ-ತಾಯಿಯರಿಗೆ ಈ ಎಲ್ಲ ಸಂಗತಿಗಳನ್ನು ಅವಳೇ ತಿಳಿಸಿದಳು. ಅಪ್ಪನೂ ಅಮ್ಮನೂ ಬಹಳ ಸಂಭ್ರಮಗೊಂಡು ಒಳ್ಳೊಳ್ಳೆಯ ಹಣ್ಣುಗಳನ್ನೂ, ಓಂಪುಡಿ. ಕೇಸರಿ, ಕಾಫಿಗಳನ್ನೂ ತಯಾರುಪಡಿಸಿ ಸಿದ್ಧರಾದರು.

ಮಧ್ಯಾಹ್ನ ತಿರುಗಿ ಒಂದು ಗಂಟೆಯಾಗುವಾಗ ಮೋಟಾರುಕಾರೊಂದು ನಮ್ಮ ಮನೆಯಮುಂದೆ ನಿಂತಿತು ಸದಾಶಿವಂ ಮತ್ತು ಇನ್ನೊಬ್ಬರು, ಅಂದರೆ ಮಾಲತಿಯ ಗಂಡ ಡಾಕ್ಟರ್ ವೆಂಕಟೇಶಂ, ಇವರು ಕೆಳಗಿಳಿದಾಗ, ತಂದೆಯವರು ಅವರನ್ನು ಸ್ವಾಗತಮಾಡಿ ಕರೆದುತಂದು ಕುರ್ಚಿಯಲ್ಲಿ ಕೂಡಿಸಿದರು. ನಾನೂ ಸರೋಜೆಯೂ ಕಾಫೀ-ತಿಂಡಿಗಳನ್ನೆಲ್ಲ ಒಯ್ದು ಮೇಜಿನ ಮೇಲೆ ಓರಣಗೊಳಿಸಿಟ್ಟೆವು. ಅನಂತರ ನಾವಿಬ್ಬರೂ ಅಕ್ಕತಂಗಿಯರು ಒಳಗಿನ ಕೋಣೆಯೊಳಗೆ, ಅಂದರೆ ಅಡುಗೆ ಮನೆಯೊಳಗೇ ನಿಂತೆವು. ತಾಯಿ ಹೊಸ್ತಿಲ ಒಳಗಿನಿಂದ ನಿಂತು ಹೊಸ ಅಳಿಯನನ್ನು ನೋಡಿ ಸಂತೋಷವನ್ನು ಪ್ರಕಟಮಾಡುತ್ತಿದ್ದಳು ಸದಾಶಿವಂ ಒಳ್ಳೆಯ ಮಧುರವಾದ ಮಾತಿನಿಂದ ತಾಯಿಯನ್ನು ಕೂಡ ಮಾತಾಡಿಸಿದುದರಿಂದ ಅವಳಿಗೆ ತುಂಬ

ತೃಪ್ತಿಯಾಯಿತು. "ಏನೋ ನಮ್ಮಂಥ ಬಡವರ ಮನೆಗೆ ತಮ್ಮಂಥವರು ಬಂದದ್ದೇ ಹೆಚ್ಚು; ನಿಮ್ಮಿಂದ ನಮ್ಮ ಮನೆ ಬೆಳಕಾಗುವಂತಾಯಿತು......" ಎಂದು ನನ್ನ ತಾಯಿ ಬಾಯಿಬಿಚ್ಚೇ ಹೇಳಿದ್ದು ಅವರಿಗೆ ತುಸು ಭಾರವಾದಂತಾಯಿತು. "ಎಲ್ಲಾ ದೇವರ ಇಚ್ಛೆಯಮ್ಮ" ಎಂದು ಅವರು ಉತ್ತರ ಕೊಟ್ಟರು. ಯಾರೋ ದೊಡ್ಡಮನುಷ್ಯರು ನಮ್ಮ ಕೋಣೆಯೊಳಗೆ ಕುಳಿತಿರುವುದನ್ನು ನೋಡಿ, ಪಕ್ಕದ ಬಿಡಾರದವರು ಅವರವರ ಕೋಣೆಯೊಳಗೆ ನಿಃಶಬ್ದವಾಗಿ ಇತ್ತಕಡೆಗೇ ಲಕ್ಷ್ಯಕೊಡುತ್ತಿರುವುದು ನನಗೆ ಗೊತ್ತಾಯಿತು. ಇವರು ಏಕೆ ಬಂದಿರುವರೆಂಬ ವಿಷಯವು ಅವರಿಗಿನ್ನೂ ಗೊತ್ತಿರಲಿಕ್ಕಿಲ್ಲವೆ?

ನಾವಿಬ್ಬರೂ ಅಕ್ಕ-ತಂಗಿಯರು ಒಳಗೇ ಸೇರಿಕೊಂಡದ್ದು ಆ ಅತಿಥಿಗಳಿಗೆ ತೃಪ್ತಿಯಾಗಿಲ್ಲವೆಂದು ತೋರುತ್ತದೆ. ತಂದೆ ನಮ್ಮನ್ನು ಹೊರಗೆ ಬರುವಂತೆ ಹೇಳಿದರು. "ಇಲ್ಲಿ ಬೆಂಚಿಯ ಮೇಲೆ ಬಂದು ಕೂತುಕೊಳ್ಳಬಹುದಲ್ಲಾ ? ನಾವೇನು ಪರಕೀಯರೆ ?" ಎಂದರು ಡಾಕ್ಟರ್ ವೆಂಕಟೇಶಂ.

"ನೀನು ಹೋಗಿ ಕೂತುಕೊ ಅಕ್ಕ" ಎಂದು ಸರೋಜ ನನ್ನನ್ನೆ ಮುಂದೆ ದೂಡಿ, ಅವಳು ಒಳಗೇ ಇದ್ದಳು. ನಾನು ಹೊರಗೆ ಬಂದು ಗೋಡೆಯ ಬದಿಯಲ್ಲಿ ಒರಗಿದ ಹಾಗೆ ನಿಂತೆ.

ಡಾಕ್ಟರ್ ವೆಂಕಟೇಶಂ ಮೊದಲು ಪ್ರಸ್ತಾಪಮಾಡಿದರು. ಶುದ್ಧ ಪ್ರೇಮಮೂಲಕವಾಗಿ ಜರುಗುವ ಇಂತಹ ಮದುವೆಗೆಲ್ಲ ಜಾತಕನೋಡುವ ಅವಶ್ಯವಿಲ್ಲವೆಂಬ ಮಾತೂ ಹಾಯ್ದಿತು. ಜಾತಕದ ನೋಟದ ಮೇಲೆ ನನ್ನ ತಂದೆಗೆ ಅಷ್ಟು ವಿಶ್ವಾಸವೂ ಇರಲಿಲ್ಲ. ಜಾತಕ ಸರಿಯಾಗಿ ಕೂಡಿದ ಮದುವೆಯಿಂದ ಎಷ್ಟು ಸಂಸಾರಗಳು ತಾನೇ ಸುಗಮವಾಗಿವೆ ? ಜಾತಕವನ್ನೆ ಮುಖ್ಯವಾಗೆಣಿಸಿ ಉಳಿದ ವಿಷಯಗಳನ್ನು ಗೌಣಗೊಳಿಸುವುದು ಶುದ್ಧ ತಪ್ಪು ಎಂದು, ಅತಿಥಿಗಳ ವಾದಕ್ಕೆ ಸರಿಯಾಗಿಯೇ ನನ್ನ ತಂದೆಯ ಅಭಿಪ್ರಾಯವೂ ಇತ್ತು. ಕಡೆಗೆ ಕಾನೂನು ಕಾಯಿದೆಗಳ ಮಾತೂ ಪ್ರವೇಶಮಾಡಿತು. ನನ್ನ ಮೊದಲಿನ ವಿವಾಹವನ್ನು ಒಂದು 'ರಿಜಿಸ್ಟ್ರೀ ನೋಟಿಸಿ'ನ ಮೂಲಕ ವಿಚ್ಛೇದನ ಗೊಳಿಸಬೇಕೆಂದು ತೀರ್ಮಾನವಾಯಿತು. ಅದನ್ನು ತಂದೆ, ವಕೀಲರ ಮೂಲಕವಾಗಿ ಮಾಡಿಸುವೆನೆಂದು ಹೇಳಿಬಿಟ್ಟರು. ಹೀಗೆಲ್ಲ ನಿಶ್ಚಯವಾದ ನಂತರ ಅವರುಗಳೇ ಪಂಚಾಂಗವನ್ನು ನೋಡಿ, ಅಂದಿಗೆ ಇಪ್ಪತ್ತು ದಿನಗಳಲ್ಲಿ ಒರುವ ಒಂದು ದಿನವನ್ನು ವಿವಾಹಮುಹೂರ್ತಕ್ಕೆಂದು ಗೊತ್ತು

ಮಾಡಿದರು. ಮದುವೆಯ ಕಾರ್ಯವೆಲ್ಲಾ ವರನ ಮನೆಯಲ್ಲಿಯೇ ಜರುಗ ಬೇಕೆಂದೂ ಮಾತಾಯಿತು. ಈ ಬಗೆಯಾಗಿ 'ನಿಶ್ಚಿತಾರ್ಥವು' ಮುಗಿದು ಬಂದವರು ಹೊರಟು ಹೋದರು.

ಅನಂತರ ಅಕ್ಕಪಕ್ಕದವರು ಬಂದವರಾರು ?— ಏನುಕತೆ ?— ಎಂಬುದನ್ನೆಲ್ಲ ವಿಚಾರಿಸದಿರುವರೇ ? ಆದರೆ ಪುಣ್ಯಕ್ಕೆ ಯಾರೇನೂ ಆಕ್ಷೇಪಣೆ ಮಾಡಲಿಲ್ಲ. ಹೊರಗೆಲ್ಲ ಚಂದಾಗಿಯೇ ಹೊಂದಿಕೆಯ ಮಾತಾಡಿದರು ಮನಸ್ಸಿನೊಳಗೆ ಏನೆಂದುಕೊಂಡರೋ ನನಗೆ ಗೊತ್ತಿಲ್ಲ.

ಮರುದಿನ ನನ್ನ ತಂದೆ ಅವರ ಪರಿಚಿತರಾದ ಒಬ್ಬರು ವಕೀಲರಲ್ಲಿಗೆ ಕರೆದೊಯ್ದರು. ಅದರಿಗೆ ಬೇಕಾದ ಅನುಭವಗಳನ್ನು ಕೊಟ್ಟು, ನನ್ನ ಮೊದಲಿನ ಗಂಡ ಕೆ. ವೆಂಕಟೇಶರಿಗೆ, ರಿಜಿಸ್ಟ್ರಿ ಮೂಲಕ 'ವಿವಾಹವಿಚ್ಛೇದಕ' ನೋಟೀಸು ಕೊಡಿಸಿದರು. ಅವರ ಹಳೆಯ ವಿಳಾಸಕ್ಕೇ ನೋಟಿಸು ಹೋಯಿತು. ಇದಕ್ಕೆ ಅವರಿಂದ ಏನಾದರೂ ಪ್ರತ್ಯುತ್ತರವು ಬಂದೀತೆಂಬ ಸಂದೇಹವೇ ನಮಗಿರಲಿಲ್ಲ. ಆದರೆ ಮುಂದಿನವಾರದಲ್ಲಿ, ' ರಿಜಿಸ್ಟ್ರಿ ನೋಟಿಸೊಂದು ನನ್ನ ಹೆಸರಿಗೇ ಬಂದುದನ್ನು ನೋಡಿ, ನಮಗೆಲ್ಲರಿಗೂ ಆಶ್ಚರ್ಯವಾಯಿತು. ನನಗೆ ಆಶ್ಚರ್ಯದೊಂದಿಗೆ ಭಯವೂ ಶಂಕೆಯೂ ಸೇರಿಕೊಂಡಿತು

ಆದರಲ್ಲಿ— ನಮ್ಮ ಜಾತಿಯ ನೀತಿಗೆ ವಿರೋಧವಾಗಿ ವಿವಾಹವನ್ನು ರದ್ದು ಪಡಿಸಲು ನಮಗೆ ಹಕ್ಕಿಲ್ಲವೆಂದೂ, ಅವರು ಅನೇಕಬಾರಿ ನನ್ನನ್ನು ತನ್ನೊಂದಿಗೆ ಬರುವಂತೆ ಕರೆದರೂ, ನಾನು ಬಾರದೆ ಇದ್ದುದರಿಂದ ಅವರು ಬಿಟ್ಟಿರಬೇಕಾಯಿತೆಂದೂ, ಈ ನೋಟೀಸು ಸಿಕ್ಕಿದ ಮೂರುದಿನಗಳೊಳಗೆ ನಾನು ಅವರ ಬಳಿಗೆ ಹೋಗದಿದ್ದರೆ, ತಕ್ಕ ಕಾಯಿದೆ ಒತ್ತಾಯದಿಂದ ನನ್ನನ್ನು ಬರಮಾಡಿಕೊಳ್ಳಲಾಗುವುದೆಂದೂ ತಿಳಿಸಲ್ಪಟ್ಟಿತ್ತು.

ತಂದೆಯವರು ಈ ನೋಟೀಸನ್ನು ಲಕ್ಷವೇಮಾಡಲಿಲ್ಲ. ಈ ವಾದವೇನೂ ಸಾಗುವಂತಿಲ್ಲವೆಂದೂ, ನನಗೆ ಈ ಗಂಡನು ಬೇಡವೆಂದು ನಾನು ಹೇಳಿಬಿಟ್ಟರೆ ಅವನಿಗೆ ಮತ್ತೇನು ಮಾಡಲಿಕ್ಕೂ ಕಾನೂನಿಲ್ಲವೆಂದೂ, ನನ್ನ ತಂದೆ ನನಗೆ ಸಮಾಧಾನ ಹೇಳಿದರು.

ಆದರೆ ಈ ನೋಟೀಸು ನನ್ನ ಹೃದಯವನ್ನೇ ಕಲಗಿಸಿಬಿಟ್ಟಿತ್ತು; ಮನಸ್ಸನ್ನು ಚಂಚಲಕ್ಕೀಡುಮಾಡಿತ್ತು. ಈ ಪುನರ್ವಿವಾಹದಿಂದ ನನಗೇನೂ

ಶುಭವಾಗಲಾರದೆಂದು ಶಂಕೆಯುಂಟಾಗತೊಡಗಿತು. ಹಿಂದೊಮ್ಮೆ ನಾನು ಮನಸಾರೆ ಮೆಚ್ಚಿ, ವಿಧಿಪೂರ್ವಕವಾಗಿ ವರಿಸಿಕೊಂಡ ಆ ಗಂಡನು ಜೀವಂತನಾಗಿ ಅದೇ ಊರಿನಲ್ಲಿರುವಾಗ, ಬಾ–ಬಾ ಎಂದು ಅವನು ನನ್ನನ್ನು ಕರೆಯುವಾಗ ನಾನು ಇಂಥಾ ಕೆಲಸ ಮಾಡಬಹುದೆ? ಇದು 'ದ್ವಿಚಾರಿಣೀ' ದೋಷವೆನಿಸದೆ? ಗಂಡನು ಕೊಂಚ ಅಡ್ಡದಾರಿಗೆ ಬಿದ್ದಿರುವನೆಂಬ ಕಾರಣದಿಂದ ನಾನು ಅವನ ಸಂಬಂಧವನ್ನು ಕಡಿದುಕೊಳ್ಳಬಹುದೆ? ಎಷ್ಟು ಮಂದಿ ಗಂಡಸರು ತಾನೇ ಪುರುಷೋತ್ತಮರಾಗಿದ್ದಾರೆ? ಎಲ್ಲಿಯೋ ನೂರರಲ್ಲಿ ಒಬ್ಬರು ಸದಾಶಿವರಾಯರಂಥವರು ಇದ್ದಾರು. ಅಂಥವರು ಪತಿಯಾಗಿ ದೊರೆಯಬೇಕಾದರೆ ಅದಕ್ಕೆ ತಕ್ಕ ಪುಣ್ಯ ಮಾಡಿರಬೇಡವೇ? ನಾನು ಅಂತಹ ಪುಣ್ಯಶಾಲಿನಿಯೇ? ಪುಣ್ಯಶಾಲಿಯಾಗಿರುತ್ತಿದ್ದರೆ ಪ್ರಥಮದಲ್ಲಿಯೇ ಅಂತಹ ಪತಿ ದೊರೆಯಬೇಕಿತ್ತು. ಈಗ 'ಪಾಲಿಗೆ ಬಂದುದೇ ಪಂಚಾಮೃತವೆ'ಂದು ತಿಳಿಯಬೇಕು—ಅಲ್ಲವೆ?........

ಏನೋ ನನ್ನ ಮನಸ್ಸಿನ ನೆಮ್ಮದಿಯೇ ಕೆಟ್ಟು ಹೋಯಿತು. ಈ ಸಮಯದಲ್ಲಿ ನಾನು ಶಾಲೆಗೆ ಹೋಗುತ್ತಿದ್ದಿಲ್ಲ. ರಜಾ ಬರೆದುಹಾಕಿದ್ದೆನು. ಸರೋಜೆ ಮಾತ್ರ ಶಾಲೆಗೆ ಹೋಗುತ್ತಿದ್ದಳು. ನಾನು ಮನೆಯಲ್ಲಿಯೇ ಇದ್ದು ತಾಯಿಗೆ ಒತ್ತಾಸೆ ಮಾಡುತ್ತಿದ್ದೆ. ಉಳಿದ ಸಮಯಗಳಲ್ಲಿ ಅದೂ ಇದೂ ಓದಿ ಮನಸ್ಸನ್ನು ಉತ್ಸಾಹಗೊಳಿಸಲೆತ್ನಿಸುತ್ತಿದ್ದೆ. ನನ್ನ ತಂಗಿ ಬರೆದಿದ್ದ ಕೆಲವು ಪದ್ಯಗಳನ್ನೂ ಓದಿದೆ. ಹಾಗೆಯೇ ಮಧ್ಯಾಹ್ನ ಊಟವಾದ ನಂತರ ತಂಗಿಯ ಪೆಟ್ಟಿಗೆಯನ್ನು ತೆರೆದು, ಒಂದೊಂದೇ ಪುಸ್ತಕಗಳನ್ನು ಬಿಡಿಸಿ ಬಿಡಿಸಿ ನೋಡುತ್ತಿದ್ದೆನು. ಅವಳು ತೀಡಿದ ಚಿತ್ರಪುಸ್ತಕವೊಂದು ಮನಸ್ಸಿಗೆ ಬಹಳ ಸೊಗಸೆನ್ನಿಸಿತ್ತು. ಆ ಪುಸ್ತಕವನ್ನು ಇದಕ್ಕೆ ಮೊದಲೂ ನಾನು ನೋಡಿದ್ದೆ. ಅವಳು ಮಾಡಿದ ಚಿತ್ರಗಳನ್ನು ನನಗೂ ತೋರಿಸುತ್ತಿದ್ದಳು. ಅವೆಲ್ಲ ಒಂದು ಬಾರಿ ನೋಡಿದ ಚಿತ್ರಗಳೇ ಆದರೂ ಮತ್ತೆ ನೋಡಬೇಕೆನಿಸುತ್ತಿದ್ದುವು. ಒಂದೊಂದೇ ಪುಟವನ್ನು ಬಿಡಿಸಿಬಿಡಿಸಿ ನೋಡುತ್ತಿದ್ದಾಗ, ಅದೊಂದು ಚಿತ್ರವು ನನ್ನನ್ನು ಅತ್ಯಂತ ಬೆರಗುಪಡಿಸಿತು. ಹೊಸ ಚಿತ್ರ ಯಾರದು? ಸದಾಶಿವರಾಯರವರದು! ರೇಖಾಚಿತ್ರವದು. ಸರೋಜೆಯೇ ಕೈಯಾರೆ ಬರೆದಿರುವಳು. ತದ್ರೂಪ ಅವರೇ. ಸರೋಜೆಯ ಚಿತ್ರಕುಶಲತೆಗಾಗಿ ಮೆಚ್ಚಿದೆ. ಆಹಾ! ಅದೆಷ್ಟು ಆಸ್ಥೆಯಿಂದ ಈ ಚಿತ್ರವನ್ನು ರೇಖಿಸಿದ್ದಾಳೆ! ಅವರನ್ನು ನೋಡದೆ ಮನಸ್ಸಿನಲ್ಲಿಯೇ ಭಾವಿಸಿಕೊಂಡು ಬರೆದ

ಚಿತ್ರವೆನ್ನಲು ಸಂದೇಹವೇ ಇಲ್ಲ. ಅಷ್ಟರಮಟ್ಟಿಗೆ ನೆನೆಯಬೇಕಾದರೆ ಅವರು ಅವಳ ಮನಸ್ಸಿನೊಳಗೆ ಎಷ್ಟು ಚೆನ್ನಾಗಿ ಬೇರೂರಿರಬೇಕು ? ಕಾರಣ ?......

ಅವಳು ಅದುವರೆಗೆ ಬರೆದ ಚಿತ್ರಗಳನ್ನೆಲ್ಲ ನನಗೂ ತೋರಿಸಿದ್ದಳು. ನನ್ನಿದಿರೇ ಬರೆಯುತ್ತಿದ್ದಳು. ಈ ಚಿತ್ರವನ್ನು ಮಾತ್ರ ನನಗೆ ತಿಳಿಯದಂತೆ ಗುಟ್ಟಾಗಿ ಚಿತ್ರಿಸಿದ್ದಾಳೆ ಅದರಲ್ಲಿರುವ ತಾರೀಕಿನಿಂದ ಅದು ಆರು ದಿನಗಳ ಹಿಂದೆ ಬರೆಯಲ್ಪಟ್ಟುದೆಂದು ಗೊತ್ತಾಗುತ್ತಿತ್ತು. ಅವಳ ಪೆಟ್ಟಿಗೆಯ ಅಡೀ ಭಾಗದಲ್ಲಿತ್ತಲ್ಲವೇ ಆ ಪುಸ್ತಕ? ಬುದ್ಧಿಪೂರ್ವಕವಾಗಿಯೇ ಅವಳು ಅದನ್ನು ಅಡಗಿಸಿಟ್ಟಿರುವಳೆನ್ನಲು ಇನ್ನು ಸಂದೇಹವುಂಟೆ ? ಚಿತ್ರದ ಬುಡದಲ್ಲಿ ಅದೇನೋ ಬರೆದಿದ್ದಾಳಲ್ಲ! ಒಂದು ಕವಿತೆ! :—

"ನಿನ್ನನೊಮ್ಮೆ ಕಂಡೆನೆ? ನಿನ್ನ ಬಳಿಯೆ ಸುಳಿದೆನೆ?
ನಿನ್ನ ಚರಿತೆಯರಿತೆನೆ? ನಿನ್ನನೆ ಜಾನಿಸಿದೆನೆ?
"ನನ್ನ ದೇವ! ಪ್ರೇಮ ದೇವ! ಎಂದು ಮನವು ಅರಳಿತೆ?
ಮನದ ಹೂವು ನಿನ್ನ ಪದಕೆ' ಶರಣು ಶರಣು ಎಂದಿತೆ?
ನಿನ್ನ ವೃತವನರಿಯದೆನ್ನ ಮನವು ಬರಿದೆ ನಲಿಯಿತೆ?
ನನ್ನ ನಲುಮೆಯಕ್ಕನಿಗೇ ನಿನ್ನ ಒಲುಮೆಯೊಲಿಯಿತೆ?
ಪ್ರೇಮ ದೇವ! ನಿನ್ನನೆನ್ನ ಮನಗುಡಿಯೊಳಗಿರಿಸುವೆ
ಅಕ್ಕನೊಲಿದ ನಿನ್ನ ನಾನು ನಿಷ್ಕಾಮದಿ ನೆನೆಸುವೆ!"

ಹಾ! ಸರೋಜಾ! ಹೀಗಿದೆಯೋ ನಿನ್ನ ಹೃದಯರಹಸ್ಯ! ಎಂತಹ ಮೋಸವಾಯಿತು! ಅಕಸ್ಮಾತ್ ಸಿಕ್ಕಿಬಿದ್ದ ಯೋಚನೆಯ ಪರೆಗಳಿಂದ, ಪೋಸ್ಟ್‌ಮ್ಯಾನ್ ತಂದುಕೊಟ್ಟ ಕಾಗದವನ್ನು ಕೂಡ ಬಿಡಿಸಿ ನೋಡದೆ, ಆ ಚಿತ್ರವನ್ನೂ ಪದ್ಯವನ್ನೂ ಮತ್ತೆ ಮತ್ತೆ ನೋಡುತ್ತಿದ್ದೆನು. ನನ್ನ ಪ್ರೀತಿಯ ತಂಗಿ ಸರೋಜೆಯ ಸಂಪೂರ್ಣ ಹೃದಯವೇ ಗೊತ್ತಾಗಿ ಹೋಯಿತು! ಹೌದು. ಸರೋಜೆ ತಾರುಣ್ಯಾವಸ್ಥೆಗೆ ಆಗ ತಾನೇ ಪ್ರವೇಶ ಮಾಡಿದ್ದಳು. ಹದಿನಾರು ವರ್ಷ ಪ್ರಾಯ. ಅದೇ ಪ್ರೇಮೋದಯವಾಗುವ ವಯಸ್ಸು. ಅದರ ಮೊದಲನೆಯ ಒರತೆಗೆ ಆಸರೆಯಾದವರೇ ಸದಾಶಿವಂ! ಅದರ ಮೊದಲನೆಯ ನೋಟಕ್ಕೆ ಬೆಳಗಿ ತೋರಿದವರೇ ಸದಾಶಿವಂ! ಅವರ ಸುಂದರ ಗಂಭೀರಯುವಾಮೂರ್ತಿ ತರುಣಿಯಾದ ಸರೋಜೆಯ ಕಣ್ಮನಗಳಲ್ಲಿ ನೆಟ್ಟುಹೋದುದರಲ್ಲಿ ಏನೂ ಆಶ್ಚರ್ಯವಿಲ್ಲ. ಅಯ್ಯೋ! ವಿಧಿ ನನ್ನ

ನ್ನೇಕೆ ಹೀಗೆ ಅಡ್ಡ ಹಾಕಿತು? ನಾನೇಕೆ ಈ ವ್ಯವಹಾರಕ್ಕೆ ಹೀಗೆ ಮನಸ್ಸು ಹಾಕಿದೆ? ... ಏನು ಮಾಡಬೇಕೀಗ? ಮೊಟ್ಟಮೊದಲು ಈ ವಿವಾಹವನ್ನು ನಿಲ್ಲಿಸಬೇಕು, ನಿಲ್ಲಿಸಲೇಬೇಕು; ಮತ್ತೆಲ್ಲ ಮತ್ತೆ........ನಾನೇ ಒಪ್ಪಿಗೆ ಕೊಟ್ಟು ಈಗ ನಾನೇ ಒಪ್ಪುವುದಿಲ್ಲವೆಂದರೆ ನನಗೇನೆಂದಾರು? ಸದಾಶಿವರಾಯರಿಗೆ ಕೈಮೇಲೆ ಕೈಹಾಕಿ ಮಾತುಕೊಟ್ಟು ಬಿಟ್ಟಿನಲ್ಲ? ತಂದೆ-ತಾಯಿಯರೊಡನೆ ಕಾರಣವೇನೆನ್ನಲಿ? ತಂಗಿಯ ಈ ಪ್ರೇಮರಹಸ್ಯವನ್ನು ನಾನು ಅರಿತೆನೆಂದು ಬಹಿರಂಗಪಡಿಸಬಹುದೆ? ಕೂಡದು! ಸರೋಜೆಗಂತೂ ತಿಳಿಯಲೇಕೂಡದು. ಅವಳಿಗೆ ನನ್ನ ಮೇಲೆ ಅಪಾರವಾದ ಪ್ರೀತಿಯಿರುವುದರಿಂದ, ಅವಳು ಈ ಮದುವೆಯನ್ನು ತಪ್ಪಿಸಲು ಎಷ್ಟುಮಾತ್ರವೂ ಸಮ್ಮತಿಪಡಳು ನಾನು ಅವಳ ಚಿತ್ರಪುಸ್ತಕವನ್ನು ನೋಡಿದೆನೆಂಬುದೇ ಅವಳಿಗೆ ತಿಳಿಯಕೂಡದು. ಓಹೊ! ಅವಳು ಬರುವ ಹೊತ್ತಾಗುತ್ತಬಂತು. ಇಂದು ಟ್ಯೂಶನ್ ಹೇಳ ಲಿಕ್ಕೆ ಹೋಗುವುದಿಲ್ಲವೆಂತ ಬೇರೆ ಹೇಳಿದ್ದಾಳೆ. ಗಡಿಯಾರ ನೋಡಿದೆ. ಗಂಟೆ ಐದಾಗಿತ್ತು. ಆ ಚಿತ್ರಪುಸ್ತಕವನ್ನು ಬೇಗಬೇಗನೆ ಅವಳ ಪೆಟ್ಟಿಗೆಯ ಅಡಿಯಲ್ಲಿ ಮೊದಲಿದ್ದಂತೆಯೇ ಇಟ್ಟುಬಿಟ್ಟೆ. ಆಗ ತಾನೇ ಪೋಸ್ಟ್ಮ್ಯಾನ್ ತಂದುಕೊಟ್ಟ ಕವರಿನ ಮೇಲೆ ನನ್ನದೂ ದೃಷ್ಟಿ ಹರಿಯಿತು.

೧೧

ಏನಾಶ್ಚರ್ಯ! ನನ್ನ ಹೆಸರಿಗೇ ಬಂದಿತ್ತು ಆ ಕವರು. ಪೋಸ್ಟ್ ಮ್ಯಾನ್ ಕೊಟ್ಟಾಗ ನನ್ನ ಮನಸ್ಸು ಹೊಯ್ದಾಟದಲ್ಲಿದ್ದುದರಿಂದ ವಿಳಾಸ ವನ್ನು ಗಮನಿಸಿರಲಿಲ್ಲ. ಏನೋ ನನ್ನ ತಂದೆಗೇ ಬಂದ ಕಾಗದವೆಂದು ಕೊಂಡು ಬದಿಗೆ ಸರಿಸಿದ್ದೆ. ಈಗ ವಿಳಾಸದಲ್ಲಿರುವ "ಗಿರಿಜಾಬಾಯಿ" ಎಂಬ ಹೆಸರು ನನ್ನ ಕಣ್ಣಿನ್ನರಳಿಸಿತು. ವಿಳಾಸದ ಅಕ್ಷರಗಳು ಒಳ್ಳೇ ನುರಿತ ಅಪರಿಚಿತ ಬರೆಹವಾದುದರಿಂದ ಯಾರದಪ್ಪಾ ಎನಿಸಿತು. ಸಂದೇಹದಿಂದ ಕವರನ್ನು ಹರಿದು ಒಳಗಿನ ಪತ್ರವನ್ನು ಬಿಡಿಸಿ ನೋಡಿದೆನು. ಓಹೊ! ಪತ್ರದಲ್ಲಿರುವುದು ಪರಿಚಯದ ಅಕ್ಷರಗಳೇ. ಅದೇ ತಾರುಮಾರಾದ ಬರೆ ವಣಿಗಿ; ವೆಂಕಟೇಶರದೇ. ಮೊನ್ನೆ ತಾನೇ ರಿಜಿಸ್ಟ್ರೀ ನೋಟೀಸು ಕೊಡಿಸಿ, ಮತ್ತೀಗ ಏನೆಂದು ಬರೆದಿದ್ದಾರು? ಓದಿದೆ:—

"ಪ್ರಿಯ ಸಹಧರ್ಮಿಣಿ ಗಿರಿಜೆಗೆ, ನೀನು ನಮ್ಮ ವಿವಾಹವನ್ನು ವಿಚ್ಛೇದ ಪಡಿಸುವ ನೋಟೀಸು ಕೊಟ್ಟದನ್ನು ನೋಡಿ, ನನ್ನ ಎದೆಗೆ ಗುಂಡು

ಹಾಕಿದ ಹಾಗಾಯಿತು. ನೀನು ಇಷ್ಟು ನಿರ್ದಯೆಳಾಗುವಿಯೆಂದು ನಾನು ನಂಬಿರಲಿಲ್ಲ. ಇಂಥ ಅನ್ಯಾಯದ ಆಲೋಚನೆ ನಿನ್ನಂತಹಳಿಗೆ ಬರಬಹುದೆ? ಹೇಗೆ ಬಂತೋ ದೇವರಿಗೇ ಗೊತ್ತು. ಅಂದು ನೀನು ನನ್ನೊಂದಿಗೆ ಅದೆಷ್ಟು ಪ್ರೇಮದಿಂದಿದ್ದಿ? ಅದೆಷ್ಟು ವಿಶ್ವಾಸವಾಗಿದ್ದಿ? ಅದನ್ನು ನೆನೆದರೆ ನನಗೆ ತುಂಬಾ ಸಂಕಟವಾಗುತ್ತದೆ. ನಾನು ನಿಮ್ಮ ಮನೆಯಲ್ಲಿಯೇ ಇರಲು ಸಾಧ್ಯವಿಲ್ಲವೆಂದು ಹೊರಟು ಬಂದ ಮಾತ್ರಕ್ಕೆ, ನೀನು ಈ ರೀತಿಯಾಗಿ ಮಾಡುವುದೆ? ನಿನ್ನನ್ನು ಪೋಷಣೆಮಾಡುವ ಭಾರವು ನನ್ನನ್ನು ಸೇರಿರುವಾಗ ನಾನು ಬರುವಂತೆ ಕರೆದರೂ, ನೀನು ನಿನ್ನ ಮಾಸ್ತರಿಕೆಯನ್ನು ಬಿಟ್ಟುಬರಲಾರೆನೆಂದು ಚಂಡಿಹಿಡಿದು ಕಳಿತುಕೊಳ್ಳುವುದು ನ್ಯಾಯವೆ? ಪ್ರಿಯ ಗಿರಿಜಾ! ನಾನು ನಿನ್ನ ಮೇಲೆ ಎಷ್ಟು ಪ್ರೇಮವಿಟ್ಟಿರುವೆನೆಂಬುದನ್ನು ನೀನೇನು ಬಲ್ಲೆ? ನೀನು ಎಂದಾದರೊಂದು ದಿನ ನನ್ನ ಬಳಿಗೆ ಬರುವಿ, ಎಂಬ ಗಟ್ಟಿ ನಂಬುಗೆಯಿಂದಲೇ ನಾನು ಜೀವಧಾರಣೆ ಮಾಡಿಕೊಂಡಿದ್ದೇನೆ. ಈಗ ನನ್ನ ಸ್ಥಿತಿಯೂ ಅನುಕೂಲವಾಗಿದೆ. ತಿಂಗಳಿಗೆ ೨೦೦ ರೂಪಾಯಿಯ ಆದಾಯವುಂಟು. ನಾನು ನಿಮ್ಮಲ್ಲಿಂದ ಹೊರಡುವಾಗ ತೆಗೆದುಕೊಂಡುಬಂದ ೫೦೦ ರೂಪಾಯಿಯನ್ನು ಕೂಡಾ ಈಗ ವಾಪಸು ಕೊಡಲು ಸಿದ್ಧನಾಗಿದ್ದೇನೆ ನೀನು ಈಗಾದರೂ ಹೊರಟು ಬರುವುದು ಮೇಲು ನಾನು ನಿನ್ನ ಮನೆಗೆ ಬಂದರೆ ನಿನ್ನ ತಂದೆ ಬಾಯಿಗೆ ಬಂದಾಬಟ್ಟೆ ನನ್ನನ್ನು ಬಯ್ಯುವರು. ಇದಕ್ಕೆ ಹೆದರಿಯೇ ನಾನು ಅಲ್ಲಿಗೆ ಬರಲಾರೆ ನಿನಗೆ ಬರುವ ಮನಸ್ಸಿದ್ದರೆ ನಿನ್ನ ತಂದೆಯ ಬೈಗಳನ್ನಾದರೂ ಲಕ್ಷ್ಯಮಾಡದೆ ನಾನು ಬಂದೇನು. ಯಾವುದಕ್ಕೂ ನಿನ್ನ ಮನಸ್ಸನ್ನು ತಿಳಿಯುವ ಕುತೂಹಲದಲ್ಲಿದ್ದೇನೆ. ನಾಳೆ ಸಾಯಂಕಾಲ ಐದು ಗಂಟೆಯ ಸಮಯಕ್ಕೆ ನಾನು ಟ್ರಿಪ್ಲಿಕೇನ್ ಬೀಚಿನಲ್ಲಿ ರೇಡಿಯೋ ರೌಂಡಿನಲ್ಲಿ ನಿನಗಾಗಿ ಕಾದಿರುತ್ತೇನೆ. ನಿನಗೆ ನನ್ನ ಮೇಲೆ ಮೊದಲಿನಂತೆಯೇ ಪ್ರೇಮ-ವಿಶ್ವಾಸಗಳಿದ್ದರೆ ನೀನು ಖಂಡಿತವಾಗಿಯೂ ಬಂದು ನನ್ನನ್ನು ಸಂಧಿಸುವಿ ಎಂದು ನಂಬುವೆನು. ಇತಿ-ಮಾಡುವ ಆಶೀರ್ವಾದ— ಕೆ. ವೆಂಕಟೇಶ"

ಇದನ್ನೋದಿ ಮುಗಿಸುವಷ್ಟರಲ್ಲಿಯೇ ಸರೋಜೆ ಬರುವ ಕಾಲ ಸಪ್ಪಳವಾದುದರಿಂದ ಆ ಕಾಗದವನ್ನು ಬೇಗಬೇಗನೇ ಸೆರಗಿನ ಮರೆಯಲ್ಲಿ ಅಡಗಿಸಿಕೊಂಡೆನು

ಈಗ ನನ್ನ ಮನಸ್ಸಿನ ಪರಿಸ್ಥಿತಿಯೇ ಬದಲಾವಣೆಯಾಗುತ್ತಿದ್ದಿತು. ನಾನು ತೀರ ಚಂಚಲ ಮಾನಸದವಳೆಂದು ನೀವು ಹಳಿಯುವಿರೇನೊ! ಹಳಿದರೂ ತಲೆಬಾಗಿಯೇ ತಾಳಿಕೊಳ್ಳುತ್ತೇನೆ. ನೋಡಿರಿ, ನನಗಿಂತಲೂ ಸರೋಜೆಯೇ ದೃಢಮನಸ್ಕಳು! ಅಬ್ಬ! ಅವಳೆಷ್ಟು ಗಟ್ಟಿಗಿತ್ತಿ! ಮನದೊಳಗಿನ ಪ್ರೇಮದ ಒತ್ತಡದ ಭಾವನೆಗಳನ್ನು ಕಿಂಚಿತ್ತಾದರೂ ಮುಖದಲ್ಲಿ ತೋರಿಸಿದಳೆ! ತಡೆಹಿಡಿದುಕೊಂಡು ಹೇಗೆ ಉತ್ಸಾಹದಿಂದಿದ್ದಾಳೆ! ಆಹಾ! ಅವಳ ಹೃದಯವನ್ನು ಭಗ್ನಗೊಳಿಸುವಂತಹ ಈ ವಿವಾಹದಲ್ಲಿ ಅವಳೆಷ್ಟು ಉತ್ಸಾಹವನ್ನು ತೋರಿಸುತ್ತಿದ್ದಾಳೆ! ಒಳಗೊಳಗೇ ಎಷ್ಟು ನೋಯುವಳೋ ಬೇಯುವಳೊ! ಅಯ್ಯೋ! ಅವಳ ತ್ಯಾಗದಮೇಲೆ ನನ್ನ ಸುಖಮಂದಿರದ ನಿರ್ಮಾಣವೆ? ಕೂಡದೇ ಕೂಡದು! ಹೇಗಾದರೂ ಸದಾಶಿವಂ ಅವಳನ್ನೇ ವರಿಸುವಂತೆ ಮಾಡಬೇಕು. ಹೇಗೆ? ಈ ಆಂತರ್ಯದ ಜಂಜಾಟಗಳನ್ನೆಲ್ಲ ಬಹಿರಂಗವಾಗಿ ಹೇಳುವ ಬಗೆ ಹೇಗೆ?....ಅದು ಹೇಗಾದರಿರಲಿ; ಮೊದಲು ನಾನು ಈ ಮದುವೆಯಿಂದ ಜಾರಿಕೊಳ್ಳಲೇಬೇಕು. ಇದರಿಂದ ಸದಾಶಿವಂರವರು ನಮ್ಮೆಲ್ಲರ ಮೇಲೂ ಸಿಟ್ಟಾಗುವ ಸಂಭವವುಂಟು........ಅದಕ್ಕೇನಾದರೂ ಸಮಾಧಾನವನ್ನು ಯೋಚಿಸಿದರಾಯಿತು .. ಹಾಗಾದರೆ ಈಗ?....ಹಾ! ಇದೇ ಸಮಯದಲ್ಲಿಯೇ ಪತಿಯ ಪತ್ರವೂ ಬರಬೇಕೆ? ಇದರಿಂದ ನಾನೀಗ ಗಂಡನ ಕರೆಗೆ ಒಳಗಾಗಿ ಹೋಗುವುದೇ ದೈವಸಂಕೇತವಿರುವಂತಿದೆ! ಹೌದು. ಅವರು ಬರೆದ ಈ ಪತ್ರದಲ್ಲಿ ಅನ್ಯಾಯವೇನೂ ಕಾಣುವುದಿಲ್ಲ. ನನ್ನ ಮೇಲೆ ಅಷ್ಟು ಪ್ರೇಮವಿಲ್ಲದಿರುತ್ತಿದ್ದರೆ ಹೀಗೆ ಬರೆದಾರೆ? ಅವರ ಸ್ಥಿತಿಯೂ ಸುಧಾರಿಸಿರುವುದೆಂದು ಬರೆದಿದ್ದಾರೆ. ಅವರಿಗೆ ಇಷ್ಟವಿಲ್ಲದಿದ್ದರೆ ನಾನಾದರೂ ಮಾಸ್ತರಿಕೆ ಮಾಡಬೇಕೆಂದು ಹಟಹಿಡಿಯುವುದು ಸರಿಯೆ? ಹೆಂಡತಿಯನ್ನು ಪೋಷಣೆ ಮಾಡುವ ಜವಾಬುದಾರಿಕೆಯನ್ನು ಹೊತ್ತಿರುವ ಗಂಡನು, ಮಾಡಬೇಕೆಂದು ಹೇಳುವ ಕೆಲಸವನ್ನು ಮಾಡಿಯೇ ತೀರುವೆನೆಂದು ಹಟಹಿಡಿಯುವುದು ಹೆಂಡತಿಗೆ ಒಪ್ಪುವುದೆ? ಹಾ! ನಾನೆಂತಹ ತಪ್ಪು ಕೆಲಸಮಾಡಿದೆ? ಪುನರ್ವಿವಾಹದ ಅಗತ್ಯವೇ ಇಲ್ಲದ ಪರಿಸ್ಥಿತಿಯಲ್ಲಿ ಏನೋ ಅಲ್ಪಸ್ವಲ್ಪ ಕ್ಷುದ್ರತೆಗಳನ್ನು ಪ್ರಧಾನವಾಗಿ ಮಾಡಿಕೊಂಡು, ಗಂಡನ ಮೇಲೆ ತೀರ ಅಪನಂಬುಗೆಯನ್ನುತಾಳಿ, ಸಲ್ಲದ ದಾರಿಗೆ ಕಾಲಿಟ್ಟೆನಲ್ಲ!....ನಾನು ತುಂಬಾ ಪಶ್ಚಾತ್ತಾಪಪಡಲಾರಂಭಿಸಿದೆ. ಎಂತಹ ತಿರುಗುಮುರುಗಾದ ಯೋಜನೆಯಾಯಿತು

ನೋಡಿದಿರಾ? ಗಂಡನ ಮೇಲೆ ಅದೆಷ್ಟು ನಂಬುಗೆ ಬಂದುಹೋಯಿತೀಗ! ಅವರು ಅಂದು ಕದ್ದ ೫೦೦ ರೂಪಾಯಿಯಂತೂ ಇರಲಿ, ನನ್ನ ಕೊರಳಿನಿಂದ ಜಾರಿಸಿದ ಬೋರಿ ಸರವು ಕೂಡಾ ನನಗೊಂದು ಕ್ಷುದ್ರವಸ್ತುವಾಗಿ ತೋರಿತು. ಮನುಷ್ಯರು ಏನೋ ಕಷ್ಟಕಾಲದಲ್ಲಿ ಕೆಲವು ಕೆಟ್ಟ ಕಲಸವನ್ನು ಮಾಡಿದ ಮಾತ್ರಕ್ಕೆ ಯಾವಾಗಲೂ ಕೆಟ್ಟವರೇ ಆಗಿಬಿಡುವರೆ?

ಅಂತೂ ಗಂಡನಬಳಿಗೆ ಹೋಗುವುದೇ ಸರಿ ಎಂದು ತೀರ್ಮಾನಿಸಿ ಕೊಂಡುಬಿಟ್ಟೆನು ನಾನು ಹೇಗೆ? ತಂದೆತಾಯಿಯರ ಒಪ್ಪಿಗೆಯಿಂದಲೇ ಹೋಗಬೇಕೆಂಬುದು ನನ್ನ ಇಚ್ಛೆ ತಂದೆ ಒಪ್ಪಿಯಾರೆ? ವೆಂಕಟೇಶರ ಹೆಸರು ಕೇಳಿದರೇ ಅವರಿಗೀಗ ಆಗುವುದಿಲ್ಲ. ಮೊದಲೇ ಇದಿರು ಸಿಟ್ಟಿನವರು. ಅದರ ಮೇಲೆ ಈಗ ಗಣನೀಯರಾದೊಬ್ಬರ ಸಂಬಂಧವು— ಮುಹೂರ್ತ ನಿಶ್ಚಯಕೂಡಾ ಆಗಿರುವಾಗ, ನಾನು ಹೀಗೆ ತಿರುಗಿ ಮಾತಾಡಿಬಿಟ್ಟರೆ ಅವ ರಿಗೆ ತುಂಬ ಸಿಟ್ಟು ಬಂದೀತು. ಸಮಾಧಾನಮಾಡಲಿಕ್ಕೂ ಸಾಧ್ಯವಿಲ್ಲದ ಸಿಟ್ಟುಬಂದು ಬಹಳ ರಗಳೆಯೇ ಉಂಟಾದೀತು. ಆದರೂ ಅವರಿಗೆ ಸೂಚನೆ ಮಾಡಿ ನೋಡದಿರಲಿಕ್ಕೂ ಮನಸೊಪ್ಪಲಿಲ್ಲ. ಉಪಾಯವಾಗಿ ಕೊಂಚ ಪ್ರಸ್ತಾವಿಸಿ ಏನು ಹೇಳುವರೋ ಕಂಡುಕೊಳ್ಳೋಣ

ಇದಿಷ್ಟು ಅಂದು ರಾತ್ರಿಯಲ್ಲಿ ನಡೆದ ಯೋಚನೆ. ಬೆಳಗಾಗುವಾಗ ಯೋಚನೆ ನಿರ್ಧಾರಕ್ಕೆ ಮುಟ್ಟಿಬಿಟ್ಟಿತ್ತು. ಆದುದರಿಂದ ಮಲಗುವಾಗ ಉದ್ವಿಗ್ನಳಾಗಿದ್ದ ನಾನು ಏಳುವಾಗ ಉತ್ಸಾಹದಿಂದಲೇ ಎದ್ದೆ. ಕ್ರಮಪ್ರಕಾರ ಸರೋಜೆ ಶಾಲೆಗೆ ಹೊರಟು ಹೋದಮೇಲೆ, ನಾನು ತಂದೆಯ ಬಳಿಯಲ್ಲಿ ಕುಳಿತು ಮೆಲ್ಲನೆ ಮಾತು ತೂರಿದೆ:— "ಅಪ್ಪಾ, ನಾನು ನಿಮಗೆ ಹೇಳಲೋ ಬೇಡವೋ ಅಂತಾ ಯೋಚನೆಮಾಡ್ತಾ ಇದ್ದೆ. ಮತ್ತೇನಿಲ್ಲಪ್ಪ, ನಿನ್ನೆ ಆ ವೆಂಕಟೇಶರಿಂದ ನನ್ನ ಹೆಸರಿಗೊಂದು ಪತ್ರ ಬೇರೆ ಬಂದಿತ್ತು...." ಎಂದು ಪುಸ್ತಕದೊಳಗಿಟ್ಟಿದ್ದ ಆ ಪತ್ರವನ್ನು ಕೈಗೆತ್ತಿಕೊಂಡೆನು.

ತಂದೆ ಕಣ್ಣರಳಿಸಿ,— "ಓಹೊ! ಮುಂದೆ ರಿಜಿಸ್ಟ್ರೀ ನೋಟೀಸಿನ ಗುಂಡುಹಾರಿಸಿ, ಹಿಂದಿನಿಂದ ನಾಜೂಕಾಗಿ ಪತ್ರಬರೆದಿದ್ದಾನೆಯೆ?........"

ನನಗೆ ಆಶ್ಚರ್ಯವಾಯಿತು. ಆ ಪತ್ರದ ಒಕ್ಕಣೆಯನ್ನು ತಿಳಿದು ಕೊಂಡವರಂತೆಯೇ ಒಡನುಡಿದರಲ್ಲ? ಅದು ಹೇಗೆ? ನಾನು ನನ್ನನ್ನು ಸಂಭಾಳಿಸಿಕೊಂಡು— "ಹೌದಪ್ಪ. ನಾಜೂಕಾಗಿಯೇ ಇದೆ."

" ಏನೂಂತ ಬರೆದಿದ್ದಾನೆ ಕಳ್ಳ ? "

" ಈಗೇನೋ ಒಳ್ಳೆಯ ಸ್ಥಿತಿಯಲ್ಲಿದ್ದಾರಂತೆ. ತಿಂಗಳಿಗೆ ಇನ್ನೂರು ರೂಪಾಯಿ ಆದಾಯವಿದೆಯಂತೆ; ನನ್ನನ್ನು ಕರಕೊಂಡು ಹೋಗಲಿಕ್ಕೆ ನಾಳೆ-ನಾಡದು ಅವರೇ ಇಲ್ಲಿಗೆ ಬರುತ್ತಾರಂತೆ."

ತಂದೆಯ ಕೋಪವು ಫಕ್ಕನೆ ಉಕ್ಕಿ ಸಿಡಿಯಿತು:— " ಬಂದರೆ ಮೆಟ್ಟಿನಲ್ಲಿ ಕೊಟ್ಟು ಕಳಿಸಿಯೇನು! ಉಂಡ ಮನೆಗೆ ಕನ್ನ ಹಾಕುವ ದ್ರೋಹಿ! " ಎಂದು ಚೀರಿದರು

ನನಗೆ ತುಂಬ ಅಂಜಿಕೆಯಾಯಿತು. ತಂದೆಯ ಮನಸ್ಸಿನ ಪರೀಕ್ಷೆಯೂ ಆಯಿತು; ಫಲಿತಾಂಶವೂ ತಿಳಿಯಿತು. " ಒಳ್ಳೆಯ ಸ್ಥಿತಿಯಂತೆ! ಕಳ್ಳನಿಗೂ ಸುಳ್ಳನಿಗೂ ಯಾವಾಗಲೂ ಒಳ್ಳೆಯ ಸ್ಥಿತಿಯೇ ಇರುತ್ತದೆ! ಮರ್ಯಾದೆ ಬೇಕಲ್ಲ ಮರ್ಯಾದೆ! ಅದು ಬರುವುದಿನ್ನು ಹತ್ತು ಜನ್ಮದಮೇಲೆ ಇದೆಲ್ಲಾ ವಿವಾಹ ರದ್ದು ನೋಟೀಸು ಕೊಟ್ಟದ್ದರ ಹೊಟ್ಟೆ ಉರಿ! ಹೇಗಾದರೂ ನಿನ್ನನ್ನು ಹಾಳುಮಾಡಬೇಕೆಂದಿದ್ದಾನೆ! ಹೊರಗಿನ ದರ್ಪಕ್ಕೆಂದು ರಿಜಿಸ್ಟ್ರೀ ನೋಟೀಸು ಕೊಟ್ಟು, ಒಳಗಿಂದೊಳಗೆ ನಿನಗೆ ರಂಗುರಂಗಾಗಿ ಪತ್ರ ಬರೆದಿದ್ದಾನೆಯೆ? ಯೋಗ್ಯನಾದರೆ ಯಾವಾಗಲೋ ಇಲ್ಲಿಗೆ ಬಂದು, ನನ್ನ ಕಾಲು ಹಿಡಿದು ಕ್ಷಮೆ ಕೇಳಿಕೊಳ್ಳುತ್ತಿದ್ದ ಏನೆಂದು ಬರೆದಿದ್ದಾನೆ? ಇತ್ತ ಕೊಡು ನೋಡುವಾ! "

" ಏನೇನೋ ಬರೆದಿದ್ದಾರಪ್ಪ; ನೋಡಬಾರದು ನೀವು. "

" ಓಹೊ! ಪ್ರೇಮ–ಗೀಮ ಅಂತ ಭಾರೀ ಬರೆದಿರಬಹುದು! "

" ನೀವು ಓದಿರುವಿರಾ ಅಪ್ಪ? "

" ಇಲ್ಲವಲ್ಲ ಗಿರಿಜಾ? "

" ಮತ್ತೆ ಓದಿದಂತೆಯೇ ಮಾತಾಡುವಿರಿ? "

" ಹೀಗೆಯೇ ಬರೆದಿರಬಹುದೂಂತ ಗೊತ್ತು ನನಗೆ! ಕಾನೂನು ಪ್ರಕಾರ ನೀನು, ಈ ಗಂಡನು ನನಗೆ ಬೇಡವೆಂದು ಹೇಳಿಬಿಟ್ಟರೆ, ಅವನಿಗೇನು ಮಾಡಲಾಗುತ್ತದೆ? ಅದಕ್ಕೇ ನಿನಗೆ ಹೀಗೆಲ್ಲಾ ಬರೆದು ಪುಸಲಾಯಿಸಿ ಬಿಡಬೇಕಂತ ಇದ್ದಾನೆ. ಇಲ್ಲಿಗೆ ಬರುತ್ತಾನಂತೇನು? ಬರಲಿ, ಸರಿಯಾದ ಮರ್ಯಾದೆಮಾಡಿ ಕಳಿಸುತ್ತೇನೆ. ನೀನು ಈ ಕಾಗದವನ್ನು ಯಾಕಿಟ್ಟುಕೊಂಡಿದ್ದಿ? ಹರಿದು ಬೆಂಕಿಗೆ ಹಾಕು! "

ನಾನು ತಡೆತಡೆದು ಹೇಳಿದೆ:— "ಆ ಐನೂರು ರೂಪಾಯಿ ಕೂಡಾ ಹಿಂದಿರುಗಿ ಕೊಡಲು ಸಿದ್ಧರಾಗಿರುವರಂತೆ."

"ಓಹೊ! ಅದು ಬೇರೆಯೆ? ಎಲ್ಲವೂ ಠಕ್ಕ. ತಿಂಗಳಿಗೆ ಇಪ್ಪತ್ತು ರೂಪಾಯಿ ಸಂಪಾದಿಸುವ ಯೋಗ್ಯತೆ ಅವನಿಗಿಲ್ಲ. ಯಾವುದೋ ಒಂದು ಅಂಗಡಿಯಲ್ಲಿ ಸಾಮಾನುಕಟ್ಟುವ ಕೆಲಸದಲ್ಲಿದ್ದಾನಂತೆ. ನಾನೆಲ್ಲಾ ವಿಚಾರಿಸಿಕೊಂಡಿದ್ದೇನೆ ಅವನ ಹಣೆಬರಹ. ಕಂಪೆನೀಗಿಂಪೆನೀ ಎಂಬುದೆಲ್ಲಾ ಬರಿಯ ಜಂಬ!"

ಅಪ್ಪನೊಡನೆ ಇನ್ನೂ ಹೆಚ್ಚು ಮಾತಾಡುವ ಧೈರ್ಯವೇ ನನಗೆ ಬರಲಿಲ್ಲ. ಮನಸ್ಸುಮಾತ್ರ ಮತ್ತೆ ಚಂಚಲಕ್ಕೆಡೆಯಾಯಿತು. ಒಂದುವೇಳೆ ಅಪ್ಪನು ಹೇಳುವಂತೆಯೇ ಇರಬಹುದೆ? ಅದಷ್ಟೂ ಮೋಸವೆ? ಏನು ತಾನೇ ಮಾಡಲೀಗ? ಈ ಪ್ರಶ್ನೆ ಗಿರಗಿರನೆ ತಿರುಗ ತೊಡಗಿತು. ಅಪ್ಪನು ಹೇಳುವಂತೆ ಗಂಡನಮೇಲೆ ನಂಬುಗೆಯಿಲ್ಲದೆ ಅಲ್ಲಿಯೇ ಇದ್ದರೆ ಮದುವೆಯ ನಿರ್ಬಂಧವು ಕೊರಳನ್ನು ಕಿವುಚುತ್ತದೆ. ಅದು ಬೇರೆ ದೊಡ್ಡ ರಗಳೆ. ಏನೇ ಇರಲಿ. ಸದ್ಯ ಇಲ್ಲಿರಲೇ ಕೂಡದು... ... ಈ ಇಕ್ಕಟ್ಟಿಗೆ ಥಕ್ಕನೆ ಭೂಮಿಯೇ ಒಮ್ಮೆ ಬಗಿದು ನನ್ನನ್ನು ಒಳಗೊಳ್ಳಬಾರದೆ ಎನಿಸಿತು. ಯಾವುದಕ್ಕೂ ಈದಿನ ಒಮ್ಮೆ ಬೀಚಿಗೆ ಹೋಗಿ ಅವರನ್ನು ಕಣ್ಣಾರೆ ಕಂಡು ಮಾತಾಡುವೆನು. ಆಗ ದೇವರು ಹೇಗೆ ಬುದ್ಧಿಕೊಡುನೋ ಹಾಗೆ ಮಾಡುವುದು. ಆಹಾ! ಮದುವೆಯ ಉರುಳು ನನ್ನನ್ನು ಆಕಡೆಗೇ ಎಳೆಯಿತು.

ಸಾಯಂಕಾಲ ತಂದೆ ಎಲ್ಲಿಗೋ ಹೊರಗೆ ಹೋಗಿದ್ದರು. ನಾನು ತಾಯಿಯನ್ನು ಕುರಿತು, "ಅಮ್ಮಾ, ಮನೆಯೊಳಗೇ ಇದ್ದು ಬಹಳ ಬೇಸರವಾಗಿದೆ. ಬೀಚಿಗೆ ಹೋಗದೆ ಬಹಳ ದಿವಸವಾಯಿತು. ಹಾಗೊಮ್ಮೆ ಹೋಗಿಬರುತ್ತೇನಮ್ಮ" ಎಂದು ಅವಳ ಅನುಮತಿ ಪಡೆದು ಹೊರಟೆ.

(೨)

ಸಾವಿರಾರು ಜನರು ನೆರೆಗೂಡುವ ಸ್ಥಾನವಲ್ಲವೇ ಮದರಾಸು ಬೀಚು? ನನ್ನ ಗುರುತಿಸವರು ಯಾರಾದರೂ ಬಂದಿರಬಹುದೇ ಎಂದು ಸುತ್ತುಮುತ್ತು ನೋಡಿದೆ. ಯಾರೂ ಇರಲಿಲ್ಲ. ಯಾರಿಗಾಗಿ ನಾನು ಅಲ್ಲಿ ಬಂದೆನೋ ಅವರೂ ಆ ರೇಡಿಯೋ ರೌಂಡಿನ ಬಳಿ ಕಾಣಿಸಲಿಲ್ಲ. ನಾನು ಅತ್ತಿತ್ತ ನೋಡುತ್ತ ಆ ರೌಂಡಿನಿಂದ ಮರಳಿನ ಮೇಲಿಳಿಯುತ್ತಿರುವಾಗ, "ಗಿರಿಜಾ!"

ಎಂಬ ಅವರ ದನಿ ನನ್ನ ಬದಿಯಲ್ಲಿಯೇ ಕೇಳಿಸಿತು. ಪಕ್ಕದಲ್ಲಿಯೇ ನಿಂತಿದ್ದ ಅವರ ಗುರುತು ಹಿಡಿಯದೆ ನಾನು ಮೋಸ ಹೋಗಿದ್ದೆ. ಹೇಗೆ ಗುರುತು ಸಿಕ್ಕೀತು? ಸೂಟು-ಬೂಟು-ಕೋಟುಗಳಿಂದ ಯಾರೋ ಒಬ್ಬರು ಆಫೀಸರ್‍ರ ಠೀವಿಯಲ್ಲಿದ್ದರು ನಾನು ಅವರನ್ನು ನೋಡಿಯೂ ಮೂರು ವರ್ಷವಾಗಿತ್ತು. ಅವರ ಮುಖದಲ್ಲಿ ಮೊದಲಿನ ತಾರುಣ್ಯದ ತೇಜಸ್ಸಿಲ್ಲದಿದ್ದರೂ, ಗೆಲ್ಮೆಯ ಕಳೆಯೊಂದು ಆವರಿಸಿತ್ತು; ಕಪೋಲಗಳು ಸ್ವಲ್ಪ ಗುಳಿಬಿದ್ದುದರಿಂದ, ಮುಖ ವೊಂದಿಷ್ಟು ಉದ್ದವಾದಂತೆ ತೋರುತ್ತಿತ್ತು.

"ಇಲ್ಲೇ ಇರುವಿರಿ? ಗುರುತೇ ಸಿಕ್ಕಲ್ಲ!" ಎಂದೆ.

"ನೀನೂ ತುಸು ಬದಲಾಯಿಸಿರುವಿ ಗಿರಿಜಾ!"

"ಸ್ವಲ್ಪ ಅತ್ತ ಹೋಗಿ ಮಾತಾಡೋಣವೆ?"

"ಬಾ."

ಇಬ್ಬರೂ ಜನರ ಗುಂಪನ್ನಳಿದು ಪ್ರತ್ಯೇಕವಾಗಿ ಹೋಗಿ, ಮರಳಿನ ಮೇಲೆ ಇದಿರುಬದಿರಾಗಿ ಕುಳಿತೆವು.

"ಗಿರಿಜ, ನಾನು ಬರೆದ ಪತ್ರದಂತೆ ನೀನು ಬಂದದ್ದು ನೋಡಿ ನನಗೆ ನಿನ್ನ ಪ್ರೇಮದಲ್ಲಿ ತುಂಬಾ ನಂಬುಗೆಯುಂಟಾಯಿತು ಆದರೆ ನೀನು ಹಾಗೆ ವಿವಾಹ ರದ್ದು ನೋಟೀಸು ಕೊಡಬಹುದೆ? ಹಾಗೇನಾಯಿತು? ಬಹುಶಃ ನಿನ್ನ ತಂದೆಯೇ ನನ್ನಮೇಲಿನ ಸಿಟ್ಟಿನಿಂದ ಹಾಗೆ ಮಾಡಿಸಿರಬೇಕು."

"ಹೌದು. ಮತ್ತೆ ನೀವು ಕೂಡಾ ನನ್ನನ್ನು ಮರೆತೇ ಇದ್ದಹಾಗಿದ್ದೀರಿ."

"ಅಯ್ಯೋ! ನಿನ್ನನ್ನು ಕರೆಯಿಸಿಕೊಳ್ಳಬೇಕೆಂದು ನನಗಿದ್ದ ಆತುರ ಅಷ್ಟಿಷ್ಟಲ್ಲ. ನಿನ್ನ ತಂದೆಯ ಭಯದಿಂದಾಗಿಯೇ ನಾನು ಸುಮ್ಮನೆ ಒಂದೊಂದೇ ದಿನವನ್ನು ದೂಡುತ್ತಿದ್ದೆ. ಈಗಲೂ ಅವರು ನನ್ನ ಮೇಲೆ ತುಂಬಾ ಸಿಟ್ಟನಿಂದಿರುವರೆ?"

"ಹೌದು ಮತ್ತೆ ನೀವು ಹಾಗೆ ರೂಪಾಯಿ ಕದ್ದುಕೊಳ್ಳಬಹುದೆ? ನನ್ನ ಕುತ್ತಿಗೆಯ ಬೋರೇಸರವನ್ನು ಕೂಡಾ ಜಾರಿಸಿದಿರಲ್ಲ?"

"ನಿನ್ನಾಣೆ ಗಿರಿಜಾ, ಬೋರಿಸರದ ಸುದ್ದಿಯೇ ನಾನರಿಯೆ. ನನ್ನ ಗ್ರಹಚಾರಕ್ಕೆ ಸರಿಯಾಗಿ ಆದಿನವೇ ನಿನ್ನ ಬೋರಿಸರವೂ ಹೋಗಬೇಕೆ? ಆದರೂ ಆ ಐನೂರು ರೂಪಾಯಿ ಬೇರೇನೂ ಉಪಾಯವಿಲ್ಲದೆ ಒಂದ

ದುರ್ಬುದ್ಧಿ ಹುಟ್ಟಿ ಹಾಗೆ ಮಾಡಿದೇಂತ ಇಟ್ಟುಕೊ. ಅದನ್ನು ಕೊಟ್ಟು ಬಿಡುವೆನು. ಆ ಹಣದ ಸಹಾಯದಿಂದಲೇ ನಾನೀಗ ಒಳ್ಳೆಯ ಸ್ಥಿತಿಗೆ ಬಂದದ್ದು ಗೊತ್ತೆ? ”

“ ಓಹೊ! ಏನು ಉದ್ಯೋಗದಲ್ಲಿರುವಿರೀಗ? ”

“ ವ್ಯಾಪಾರ ಭವಾನೀ ಸ್ಟೋರ್ಸ್ ಅಂತ ಒಂದು ಕಂಪೆನಿಯಲ್ಲಿ ನಾನೂ ಒಬ್ಬ ಭಾಗಸ್ಥನಾಗಿದ್ದೇನೆ. ದೇವರ ದಯದಿಂದ ಲಾಭವೇ ಆಗುತ್ತದೆ. ಕಡಿಮೆಯೆಂದರೆ ತಿಂಗಳಿಗೆ ಇನ್ನೂರು ರೂಪಾಯಿಗೆ ಮೋಸವಿಲ್ಲ. ”

“ ಹೌದೆ? ಇದಕ್ಕೆಲ್ಲ ಬೇಕಾದ ವಿದ್ಯೆಯನ್ನು ನೀವೆಲ್ಲಿ ಕಲಿತಿರಪ್ಪ ಇಂಗ್ಲೀಷು ಕೂಡಾ ಬಾರದಲ್ಲ ನಿಮಗೆ? ”

“ ಇದಕ್ಕೆಲ್ಲ ವಿದ್ಯೆ ಯಾಕೆ? ಇಂಗ್ಲೀಷ ಯಾಕೆ? ಲೆಕ್ಕ ಗೊತ್ತಿದ್ದ? ರಾಯಿತು. ಬಾಕಿ ಕೆಲಸಕ್ಕೆಲ್ಲ ಗುಮಾಸ್ತರಿಲ್ಲವೆ? ಏಕೆ ಗಿರಿಜಾ, ನಿನಗೆ ನಂಬುಗೆಯಿಲ್ಲವೆ? ”

“ ಮಾತಿನಲ್ಲಿ ನಂಬುಗೆಯಾಗದಿದ್ದರೂ ನಿಮ್ಮನ್ನು ನೋಡಿದರೆ ನಂಬಬೇಕೆನಿಸುತ್ತದೆ. ಆದರೆ ತಂದೆಗೆ ಮಾತ್ರ ಕೊಂಚವೂ ನಂಬುಗೆಯಿಲ್ಲ. ”

“ ಯಾಕೆ? ನನ್ನ ಪತ್ರದ ಪ್ರಸ್ತಾಪವನ್ನು ಅವರೊಡನೆ ಮಾಡಿದಿಯಾ? ”

“ ಸ್ವಲ್ಪಮಾತ್ರ ಮಾಡಿದೆ. ಅಷ್ಟರಲ್ಲಿಯೇ ಅವರು ಕೋಪಾಟೋಪದಿಂದ ಹಾರಿ ಚೀರಿದರು. ”

“ ಹೌದೌದು. ಅವರ ಆ ಇದಿರು ಸಿಟ್ಟಿಗೇ ನಾನೂ ಅಂಜುವುದು. ನಾನೆಲ್ಲಿಯಾದರೂ ಅವರಿದಿರು ಬಂದರೆ, ಅವರೇನಾದರೂ ತಾರುಮಾರಾಗಿ ವರ್ತಿಸಿ, ನನಗೂ ಸಿಟ್ಟೇರಿ ಏನಾದರೂ ಹಿರಿಯರಿಗೆ ಅವಮರ್ಯಾದೆಯಾಗ ಬಾರದಲ್ಲಾಂತ ನಾನು ಅಲ್ಲಿಗೆ ಬಂದು ನಿನ್ನನ್ನು ಸಂಧಿಸಲಿಲ್ಲ. ಬಂದರೆ ನಿನ್ನೊಡನೆ ಮಾತಾಡಲಿಕ್ಕಾದರೂ ಅವರು ಬಿಡುವರೆ? ”

“ ಹೌದು. ಸುಳ್ಳಲ್ಲ. ಹಾಗಾದರೆ ನೀವೀಗ ನನ್ನನ್ನು ಕರೆದುಕೊಂಡು ಹೋಗಲು ಸಿದ್ಧರಾಗಿರುವಿರಾ? ”

“ ಆಹಾ! ಒಂಟಿಗಾಲಲ್ಲಿ ನಿಂತಿದ್ದೇನೆ. ಬಿಡಾರವೂ, ಸಂಸಾರಕ್ಕೆ ಬೇಕಾದ ಎಲ್ಲಾ ಸಾಮಾನುಗಳೂ ತಯಾರಾಗಿವೆ. ನೀನು ಯಾವಾಗ ಬರುತ್ತಿ? ”

ನಾನು ಯೋಚಿಸುತ್ತ— "ತಂದೆ ಎಷ್ಟುಮಾತ್ರಕ್ಕೂ ನನ್ನನ್ನು ಕಳು ಹಿಸಲಿಕ್ಕಿಲ್ಲ. ನಾನು ಟೀಚರ್ ಕೆಲಸಕ್ಕೆ ರಾಜೀನಾಮೆ ಕೊಟ್ಟೇ ಬರ ಬೇಕಾಗುತ್ತದೆ. ಇದು ತಂದೆಗೆ ಸುತರಾಂ ಇಷ್ಟವಿಲ್ಲದ್ದು. ಈ ಸ್ಥಿತಿಯಲ್ಲಿ ತಂದೆ-ತಾಯಿಗಳೊಡನೆ ಹೇಳದೆ ಹೊರಡಬೇಕಲ್ಲಾ ಎಂದು ಚಿಂತೆ ಯಾಗಿದೆ."

"ಅದಕ್ಕೇನುಮಾಡುವುದು? ನೀನು ನನ್ನೊಂದಿಗೆ ಬಂದು ಸುಖವಾಗಿರು ವುದು ಪ್ರತ್ಯಕ್ಷ ಗೊತ್ತಾದಾಗಲೇ ಅವರಿಗೆ ನಂಬುಗೆಯಾದೀತು. ಆಗಲೇ ಅವರ ಮನಸ್ಸೂ ಸರಿಯಾದೀತು."

ಇದು ನಿಜವೆನಿಸಿತು ನನಗೂ.

"ಏನೂ ಯೋಚನೆ ಮಾಡಬೇಡ ಗಿರಿಜಾ. ನೀನು ಯಾವಾಗ ಹೊರಟು ಬರುವಿ? ನಿನ್ನ ಮನೆಯ ಬಳಿಯಲ್ಲೇ ನಾನು ಕಾದಿರುತ್ತೇನೆ."

"ಹಾಗಾದರೆ ನಾನು ನಾಳೆ ರಾತ್ರಿ, ಅಂದರೆ ನಾಡದು ಬೆಳಂಜಾವದಲ್ಲಿ ಮನೆಯಿಂದ ಹೊರಟು ಬಿಡುತ್ತೇನೆ, ನೀವೆಲ್ಲಿ ಕಾದಿರುತ್ತೀರಿ?"

"ನಿಮ್ಮ ಮನೆಯ ಬಳಿ ಟ್ರಾಂ ರೋಡಿನಲ್ಲಿ ಟ್ರಾಂ ನಿಲ್ಲುವ ಜಾಗೆ ಇದೆಯಲ್ಲವೆ? ಅಲ್ಲಿಯೇ ಅಂಗಡಿಯ ಜಗಲಿಯಲ್ಲಿ ನಿನ್ನ ಬರುವಿಕೆಯನ್ನಿದಿರು ನೋಡುತ್ತ ನಿಂತಿರುತ್ತೇನೆ."

"ನನಗೆ ಕೈಯಲ್ಲಿ ಗಂಟು ಮೂಟೆ ಏನೂ ತರಲಿಕ್ಕಾಗಲಿಕ್ಕಿಲ್ಲ."

"ಏನೂ ಬೇಡ. ನಿನಗೆ ಒಪ್ಪುವಂತಹ ಸೀರೆ-ರವಕೆಗಳನ್ನೆಲ್ಲ ನಾನೇ ನಾಳೆ ಹಗಲಿನಲ್ಲಿ ಕೊಂಡುಕೊಳ್ಳುತ್ತೇನೆ."

ಹೀಗೆ ಮಾತಾಡಿಕೊಂಡ ಮೇಲೆ ನಾವಿಬ್ಬರೂ ಅಲ್ಲಿಂದ ಹೊರಟೆವು. ಅವರು ನನ್ನನ್ನೊಂದು ಹೋಟಲಿಗೆ ಕರೆದೊಯ್ದರು. ಅಲ್ಲಿ ಕೊಂಚ ಕಾಫೀ ಸೇವಿಸಿದ ಮೇಲೆ ನಾವಿಬ್ಬರೂ ಅಗಲಿದೆವು

ನಾನು ನನ್ನ ಪುನರ್ವಿವಾಹದ ಸುದ್ದಿಯನ್ನೆ ಅವರ ಮುಂದೆ ಎತ್ತಲಿಲ್ಲ. ಆದುದರಿಂದ ಅವರಿಗೆ ಅದು ಗೊತ್ತಿರಲಿಕ್ಕೂ ಕಾರಣವಿರಲಿಲ್ಲ. ಅದು ಅವ ರಿಗೆ ತಿಳಿಯುವುದೂ ಲೇಸಲ್ಲ.

ಅಯ್ಯೊ! ನಾನು ಮನಸ್ಸಿನೊಳಗೆ ಮಾಡಿಕೊಂಡ ತೀರ್ಮಾನವು ನನ್ನ ತಂದೆ-ತಾಯಿಗಳಿಗೆ ಗೊತ್ತು ಇಲ್ಲ. ಅವರು ನನ್ನ ಪುನರ್ವಿವಾಹದ ವಿಷಯ ವನ್ನೇ ಕುರಿತು ಸಂತೋಷದಿಂದ ಮಾತಾಡಿಕೊಳ್ಳುತಿರುವಾಗ, ನನಗಾದ

ದುಃಖವನ್ನು ಏನೆನ್ನಲಿ? ಕಲ್ಲುಮಾಡಿಕೊಂಡೆನು ಮನಸ್ಸನ್ನು.

ಮರುದಿನ ಮಧ್ಯಾಹ್ನದಲ್ಲಿ ತಂದೆಯವರು ಊಟಮಾಡಿ, ನಡುನಿದ್ದೆಯಲ್ಲಿದ್ದರು. ನಾನು ರಹಸ್ಯವಾಗಿ ಎರಡು ಪತ್ರಗಳನ್ನು ಬರೆಯಲಾರಂಭಿಸಿದೆನು ಒಂದು ನನ್ನ ಶಾಲೆಯ ಕೆಲಸಕ್ಕೆ 'ರಾಜೀನಾಮೆ'ಯ ಪತ್ರ; ಇದನ್ನು ಬರೆಯುವಾಗ ನನ್ನ ಕೈ ನಡುಗಿತು ತಂದೆ ಅತ್ಯಂತ ಕಷ್ಟಪಟ್ಟು ಸಾಧಿಸಿ ಕೊಟ್ಟ ಮಾಸ್ತರಿಕೆ; ಮುದ್ದು ಬಾಲಿಕೆಯರಿಗೆ ಕಲಿಸುವಂತಹ ನನ್ನ ಪ್ರೀತಿಯ ಮಾಸ್ತರಿಕೆ; ಈ ಮಾಸ್ತರಿಕೆಯನ್ನು ಉಳಿಸಿಕೊಳ್ಳಲಿಕ್ಕಾಗಿ ಗಂಡನೊಂದಿಗೆ ಬಾಳುವೆಮಾಡುವುದನ್ನುಕೂಡ ನಾನು ಬಿಟ್ಟುಬಿಟ್ಟದ್ದನಲ್ಲವೆ? ಈಗ ಈ ಮಾಸ್ತರಿಕೆ ಇನ್ನೊಂದು ಮದುವೆಯ ಜಾಲಕ್ಕೆ ಸಿಕ್ಕಿಸುವಂತಹುದಾದುದರಿಂದ ನಾನು ರಾಜೀನಾಮೆ ಕೊಡಲೇ ಬೇಕು. ಮುಂದೆ ಗಂಡನ ಮನಸ್ಸನ್ನು ಹೇಗಾದರೂ ಒಲಿಸಿಕೊಂಡು, ಬೇರೊಂದು ಶಾಲೆಯಲ್ಲಿ ಮಾಸ್ತರಿಕೆಯನ್ನು ದೊರಕಿಸಿ ಕೊಳ್ಳಲೂಬಹುದಲ್ಲವೆ? ಗಟ್ಟಿಮನಸ್ಸಿನಿಂದ ರಾಜೀನಾಮೆಯನ್ನು ಬರೆದು ಮುಗಿಸಿದೆನು.

ಅನಂತರ ಗೆಳತಿ ಮಾಲತಿಗೊಂದು ಪತ್ರವನ್ನು ಈ ರೀತಿಯಾಗಿ ಬರೆದೆನು :—

"ಪ್ರಿಯ ಗೆಳತಿ ಮಾಲತಿಗೆ, ಗಿರಿಜೆಯ ಅರಿಕೆಗಳು.

ಈ ಪತ್ರವನ್ನೋದುವಾಗ ನಿನಗೆ ಆಶ್ಚರ್ಯವೂ ನನ್ನ ಮೇಲೆ ಕೋಪವೂ ಬಂದೀತು. ಕಾರಣ, ನಾನು ನಿನ್ನಣ್ಣನೊಂದಿಗೆ ವಿವಾಹಕ್ಕೆ ಮಾತುಕೊಟ್ಟು, ಮುಖತಃ ಮಾತಾಡಲು ಮುಖವಿಲ್ಲದೆ ಈಗ ಜಾರಿಕೊಳ್ಳುತ್ತಿದ್ದೇನೆ ಹೀಗೆ ಜಾರಿಕೊಳ್ಳಲು ಕಾರಣವೇನುದರೆ, ವಿವರಿಸಿ ಬರೆಯಲು ಕೈಬರುವದಿಲ್ಲ. ಹಾಗೆ ಹೇಳುವಂತಹುದಾಗಿರುತ್ತಿದ್ದರೆ, ನಾನು ಹೀಗೆ ಕಾಗದ ಬರೆಯಬೇಕಾಗಿಯೇ ಇರಲಿಲ್ಲ. ತಂದೆಗೂ ತಾಯಿಗೂ ತಿಳಿಸದೆ ಕಳ್ಳಿಯ ಹಾಗೆ ನಾನೀಗ ಓಡಿಹೋಗಬೇಕಾಗಿಯೂ ಇರಲಿಲ್ಲ. ಹೌದು ಗೆಳತೀ, ನಾನು ಕಳ್ಳಿಯಂತೆಯೇ ಹೊರಟಿರುವೆನು. ಈ ಕಾಗದ ನಿನಗೆ ಸಿಕ್ಕುವಾಗ, ನಾನು ನನ್ನ ಗಂಡ ವೆಂಕಟೇಶರ ಸಾನ್ನಿಧ್ಯದಲ್ಲಿರುವೆನೆಂದು ತಿಳಿ. 'ಗಿರಿಜ ಗಂಡನೊಂದಿಗೆ ಕಳ್ಳಿಯಂತೆ ಓಡಿ ಹೋದಳು' ಎಂಬ ಅಪೂರ್ವವಾದ ಮಾತನ್ನು ನೀನು ಕೇಳುತ್ತೀ. ನನ್ನ ಅಂತರಾತ್ಮವು ಇದೇ ಸರಿಯಾದುದೆಂದು ಹೇಳಿದುದರಿಂದ ನಾನು ಹೀಗೆ ಮಾಡಿದೆನು. ನನ್ನ ಅಪರಾಧವನ್ನು

ಕ್ಷಮಿಸಬೇಕೆಂದು ಕೇಳಿಕೊಳ್ಳುತ್ತೇನೆ. ಹಾಗೆಯೇ ಗೌರವನೀಯರಾದ ಅಣ್ಣ ಸದಾಶಿವಂರಲ್ಲಿಯೂ ನಾನು ಕ್ಷಮೆಯನ್ನು ಕೇಳಿಕೊಳ್ಳುತ್ತೇನೆ. ಅವರನ್ನು ನನ್ನ ಮೇಲೆ ಪ್ರಸನ್ನರನ್ನಾಗಿ ಮಾಡುವ ಭಾರವು ನಿನ್ನನ್ನೇ ಸೇರಿದೆ. ಇನ್ನೊಂದು ವಿಷಯ; ಇದನ್ನು ತಿಳಿಸಲು ನನಗೆ ತುಂಬ ಅಂಜಿಕೆಯಾಗುತ್ತಿದೆ. ನನ್ನ ತಂಗಿ ಸರೋಜೆಯನ್ನು ಸದಾಶಿವಂರವರು ವಿವಾಹ ಮಾಡಿಕೊಳ್ಳಬೇಕೆಂದು ನಾನು ಕೇಳಿಕೊಳ್ಳಬಹುದೇ ? ಹಾಗಾದರೆ ನಾನು ತುಂಬಾ ಸಂತೋಷಗೊಳ್ಳುವೆನು. ಬರಿಯ ನನ್ನ ಸಂತೋಷಕ್ಕಾಗಿಯೇ ನಾನು ಹೀಗೆ ಕೇಳಿಕೊಳ್ಳುವುದೂ ಅಲ್ಲ. ಸರೋಜೆ ಅವರನ್ನು ತನ್ನ ಆರಾಧ್ಯ ದೈವವನ್ನಾಗಿಯೇ ತಿಳಿದಿರುತ್ತಾಳೆಂದು ನಾನು ನಂಬುವೆನು ಸದ್ಯ ಈ ರಹಸ್ಯವನ್ನೂ ಸರೋಜೆಗೆ ತಿಳಿಸಬಾರದೆಂತಲೂ ಕೇಳಿಕೊಳ್ಳುವೆನು ತಿಳಿಸಿದರೆ ಅದರಿಂದಲೇ ನಾನು ಜಾರಿಕೊಂಡೆನೆಂದು ತಿಳಿದು, ಅವಳು ನೊಂದುಕೊಂಡಾಳು ನಾನು ಜಾರಿಕೊಳ್ಳಲು ಇದೂ ಒಂದು ಕಾರಣವೆಂಬುದನ್ನು ಕೂಡಾ ನಾನು ಒಪ್ಪಿಕೊಳ್ಳುವೆನು. ಇದರೊಂದಿಗೆ ಬೇರೆ ಕಾರಣವೂ ಇದೆ. ಮುಖ್ಯವಾಗಿ ಒಂದು ಮದುವೆ ನನಗಾಗಿರುವಾಗ, ಕ್ಷುದ್ರವಾದ ಕಾರಣದಿಂದ ಆ ವಿವಾಹವನ್ನು ಮುರಿದುಕೊಳ್ಳಲು ನನ್ನಾತ್ಮವು ಸಮ್ಮತಿಸಲಿಲ್ಲ. ನನ್ನ ಪತಿಯೂ ನನ್ನ ಮೇಲೆ ತುಂಬ ಪ್ರೇಮವುಳ್ಳವರೆಂಬ ನಂಬುಗೆಯೂ ನನಗಾಗಿದೆ. ನಾನೂ ಅವರನ್ನು ಪ್ರೇಮಿಸಿದ್ದೇನೆ. ಹೆಚ್ಚಿಗೇನೆನ್ನು ಬರೆಯಲಿ ? ಪ್ರಿಯಗೆಳತೀ ! ನನ್ನನ್ನು ಕ್ಷಮಿಸಬೇಕೆಂದು ಇನ್ನೊಮ್ಮೆ ಕೇಳಿಕೊಳ್ಳುತ್ತೇನೆ. ಇತಿ——

ಗಿರಿಜಾ ”

ಇದಾದ ಮೇಲೆ ನನ್ನ ಹೆತ್ತವರಿಗೊಂದು ಪತ್ರವನ್ನು ಬರೆದಿಟ್ಟೆನು. ಅದರಲ್ಲಿ “ ನಾನು ಮಾಡಿಕೊಂಡ ತೀರ್ಮಾನಕ್ಕೆ ನಿಮ್ಮ ಸಮ್ಮತಿ ದೊರೆಯಲಾರದೆಂಬ ಕಾರಣದಿಂದ, ನಿಮಗೆ ಹೇಳದೆಯೇ ಗಂಡನ ಬಳಿಗೆ ಹೊರಟಿದ್ದೇನೆ. ನನ್ನ ಪತಿ ಯೋಗ್ಯ ನಡೆವಳಿಕೆಯುಳ್ಳವರೆಂಬ ವಿಷಯವಾಗಿ ನನ್ನನ್ನು ನಂಬುಗೆಪಡಿಸಿದ್ದಾರೆ. ಅಂತೆಯೇ ಪುನರ್ವಿವಾಹಕ್ಕೆ ನಾನು ಕೊಟ್ಟ ಮಾತನ್ನು ಮುರಿದು ಹೊರಡಬೇಕಾಯಿತು. ಕ್ಷಮಿಸಿ ನನ್ನನ್ನು ಆಶೀರ್ವದಿಸಿರಿ. ಸಾಧ್ಯವಾದರೆ ಸರೋಜೆಗೆ ಸದಾಶಿವಂರೊಂದಿಗೆ ಮದುವೆಮಾಡುವ ಪ್ರಯತ್ನ ಮಾಡಬೇಕೆಂದೂ ಕೇಳಿಕೊಳ್ಳುವೆನು........” ಎಂದು ಮುಂತಾಗಿ ಬರೆದಿದ್ದೆನು.

ರಾಜೀನಾಮೆಯನ್ನೂ, ಮಾಲತಿಯ ಪತ್ರವನ್ನೂ ಅಂದು ಸಂಜೆ ಯಲ್ಲಿಯೇ ಟಪ್ಪಾಲಿಗೆ ಸೇರಿಸಿದೆನು. ಹೆತ್ತವರಿಗೆ ಬರೆದ ಪತ್ರವು ನಾನು ಹೊರಟ ಕೂಡಲೆ ಅವರಿಗೆ ಸಿಕ್ಕುವಂತೆ, ಬಾಗಿಲ ಕೊಂಡಿಗೇ ತಗುಲಿಸಿ ಟ್ಟೆನು. ಇನ್ನೇನು? ಮುಂಜಾನೆ ಐದುಗಂಟೆಯ ಸಮಯದಲ್ಲಿ ಎಲ್ಲರಿ ಗಿಂತಲೂ ಮೊದಲೇ ನಾನೆದ್ದು ಹೊರಟವಳು, ಮತ್ತೆ ಮನೆಯೊಳಗೆ ಹೋಗ ಲಿಲ್ಲ. ಹೇಳಿದ ಸ್ಥಳದಲ್ಲಿ ನನ್ನ ಪತಿ ವೆಂಕಟೇಶರು ನನಗಾಗಿ ಕಾದಿದ್ದರು. ಬಳಿಯಲ್ಲಿಯೇ ಮೋಟಾರುಕಾರೊಂದು ನಿಂತಿತ್ತು. ಡ್ರೈವರನ ಸ್ಥಾನದಲ್ಲಿ ಒಬ್ಬರು ಶ್ರೀಮಂತರು ಕುಳಿತಿದ್ದರು. ಆ ಕಾರಿನ ಹಿಂದಿನ ಸೀಟಿನಲ್ಲಿ ನಾನೂ ಅವರೂ ಏರಿಕೊಂಡೆವು. ಅದು ಅವರ ಕಂಪೆನಿಯ ಕಾರಂತೆ; ಆ ಶ್ರೀಮಂತರು ಅವರ ಕಂಪೆನಿಯ ಇನ್ನೊಬ್ಬರು ಪಾಲುಗಾರರಾದ ಅವರ ಆಪ್ತಮಿತ್ರರಂತೆ!

ಆ ಕಾರು ಶ್ರೀಮಂತರ ಮನೆಯೊಳಗೇ ಹೋಯಿತು.

೧೩

ಆ ಶ್ರೀಮಂತರ ಮನೆಯ ಒಂದರ್ಧಭಾಗವೇ ನಮ್ಮ ಬಿಡಾರವಾಗಿತ್ತು. ಉಳಿದರ್ಧಭಾಗದಲ್ಲಿ ಅವರಿದ್ದರು. ಆ ಮನೆ ವಿಸ್ತಾರವಾದ ಕಂಪಾವುಂಡಿನ ವಠಾರದ ನಡುವಿನಲ್ಲಿರುವ ಶ್ರೀಮಂತರರೀತಿಯ ಬಂಗಲೆ. ನಮ್ಮ ಭಾಗವು ಒಳ್ಳೆಯ ಪ್ರಶಸ್ತವಾಗಿತ್ತು. ಅಡುಗೆಮನೆ ಊಟದಕೋಣೆ ಒಂದು ಡ್ರಾಯಿಂಗ ರೂಮಿನಂತಹ ಕೊಟಡಿ ಇಷ್ಟಿದ್ದುವು. ಅಡುಗೆಗೆ ಬೇಕಾದ ಪಾತ್ರೆ ಸಾಮಾನುಗಳೂ ತಯಾರಿದ್ದುವು. ನಾವು ಮನೆಯೊಳಗೆ ಪ್ರವೇಶ ಮಾಡುವಾಗ, ಮನೆಯ ಯಜಮಾನನೂ ನಮ್ಮ ಹಿಂದೆಯೇ ಹೊಕ್ಕು, ನನ್ನನ್ನು ಕುರಿತು— "ನೋಡಿದಿರಾ ಗಿರಿಜಮ್ಮ? ಮನೆ ಚೆನ್ನಾಗಿದೆಯಷ್ಟೆ? ಪಾಪ, ನೀವಿಲ್ಲದೆ ನಿಮ್ಮನ್ನೆ ಜಪಿಸುತ್ತ ವೆಂಕಟೇಶರು ತುಂಬ ಬಾಡಿಹೋದರು. ನಾನು ಎಷ್ಟೋ ಒತ್ತಾಯ ಮಾಡಿದ ಮೇಲೆ ಈಗ ಇವರು ನಿಮ್ಮನ್ನು ಕರ ಕೊಂಡು ಬಂದರು. ಇವರನ್ನು ನಾನು ನಮ್ಮವರೆಂದೇ ತಿಳಿದುಬಿಟ್ಟದ್ದೇನೆ. ನಮ್ಮನ್ನು ಕೂಡಾ ನೀವು ಪರಕೀಯರೆಂದು ತಿಳಿಯಬಾರದು............" ಎಂದು ಬಾಯಿತುಂಬ ಮಾತಾಡತೊಡಗಿದನು.

ನಾನೇನೂ ಅವನಿಗೆ ಉತ್ತರಕೊಡಲಿಲ್ಲ. ವೆಂಕಟೇಶರು ಅವನ ಮಾತಿ ಗೆಲ್ಲ ನಗುವಿನೊಡನೆ ಸೈಗುಟ್ಟಿ, ಅವರ ಹೆಸರು ಧನದಾಸಮುದಲಿಯಾರ ರೆಂತಲೂ ತುಂಬ ಒಳ್ಳೆಯವರೆಂತಲೂ ನನಗೆ ತಿಳಿಸಿದರು.

ಧನದಾಸನು ನಾವು ಅವರ ಮನೆಗೇ ಬಂದ ಅತಿಥಿಗಳಂತೆ, ತನ್ನ ಕೆಲಸದಾಳನ್ನು ಹೋಟೆಲಿಗೆ ಕಳುಹಿಸಿ ನಮಗಾಗಿ ಕಾಫೀ-ಇಡ್ಲಿಗಳನ್ನು ತರಿಸಿದನು. ನಮ್ಮ ಜತೆಯಲ್ಲಿಯೇ ಅವನೂ ತೆಗೆದುಕೊಂಡನು. ಆಗ ನನಗೆ ಸಂಕೋಚವೆನಿಸಿದಾಗ, ವೆಂಕಟೇಶರು ಕೂಡ ಒತ್ತಾಯಪಡಿಸಿದುದರಿಂದ ನಾನೂ ಸಂಕೋಚವನ್ನು ಬದಿಗೊತ್ತಿ ಅವರ ಜತೆಯಲ್ಲಿಯೇ ತೆಗೆದುಕೊಂಡೆ. ಅಪರಿಚಿತಳಾದ ತರುಣಿಯ ಮುಂದೆ ಅವನು ಒಮ್ಮೆಗೇ ಅಷ್ಟು ಸಲಿಗೆ ತೋರಿಸಿಕೊಂಡು ಬಂದದ್ದು ನನಗೇನೋ ವಿಚಿತ್ರವೆನಿಸಿತು.

ಅನಂತರ ಅವನು— "ಗಿರಿಜಾಬಾಯಿ, ನೀವು ಈಗಲೇ ಅಡುಗೆಗೆ ಪ್ರಾರಂಭಿಸುವ ಶ್ರಮ ತೆಗೆದುಕೊಳ್ಳಬೇಡಿ ನಾನು ಆಗಲೇ ನಿಮಗಿಬ್ಬರಿಗೂ ಊಟ ತರಿಸುವ ಏರ್ಪಾಡು ಮಾಡಿರುತ್ತೇನೆ" ಎಂದು ಬಿಟ್ಟನು. ಹೇಳಿದರೆ ನನ್ನ ಪತಿ ಹೇಳಬೇಕಾಗಿದ್ದ ಈ ಮಾತನ್ನು ಆತನೇ ಹೇಳಿದುದು ನನಗೇನೋ ಅಧಿಕಪ್ರಸಂಗವೆನಿಸಿತು.

ಬಳಿಕ ಅವನು ತನ್ನ ಮನೆಯೊಳಗೆ ಹೋಗಿ ಒಂದು ಜವುಳಿಯ ಗಂಟನ್ನು ಎತ್ತಿಕೊಂಡು ಬಂದು, ನನ್ನ ಮುಂದಿಟ್ಟು, ಅದರೊಳಗಿಂದ ಬೆಲೆಬಾಳುವ ಸೀರೆಗಳನ್ನೂ ರವಕೆಗಳನ್ನೂ ತೆಗೆದು ಬಿಡಿಸಿಬಿಡಿಸಿ ನನಗೆ ತೋರಿಸುತ್ತ "ಹೇಗಿದೆ? ಚೆನ್ನಾಗಿದೆಯೆ? ಮನಸ್ಸಿಗೆ ಹಿಡಿಯಿತೆ?" ಎಂದು ಮುಂತಾಗಿ ಕೇಳತೊಡಗಿದನು. ನಾನು "ಹುಂ, ಹುಂ" ಎನ್ನುತ್ತ ತಲೆಯಲ್ಲಾಡಿಸಿದೆ ಅಷ್ಟೆ. ನನ್ನವರು ನನ್ನನ್ನೂ ಅವನನ್ನೂ ನೋಡುತ್ತ ಮುಗುಳ್ನಗುತ್ತಿದ್ದರು. ಆ ಜವುಳಿಗಳನ್ನೆಲ್ಲ ಅಲ್ಲಿಟ್ಟು ಒಂದು ರೀತಿಯಾಗಿ ಆ ಮನುಷ್ಯನು ತೊಲಗಿಹೋದ ಮೇಲೆ ನಾನು ನನ್ನ ಪತಿಯನ್ನು ಕುರಿತು ಕೇಳಿದೆ:— "ಈ ಶೀರೆಗಳನ್ನೆಲ್ಲ ಅವನೇ ಕೊಂಡುತಂದನೆ?"

"ಹೌದು ಗಿರಿಜ, ನಾನು ಅವರೊಡನೆ ಹೇಳಿದ್ದೆ. ಎಲ್ಲ ಅವರೇ ಸೆಲೆಕ್ಟ್ ಮಾಡಿ ತಂದದ್ದು."

"ಯಾಕೆ ನೀವು ತೆಗೆದುಕೊಳ್ಳಬಾರದಿತ್ತೇನು?"

"ನನಗೆ ತುಂಬ ಕೆಲಸವಿತ್ತು. ಅದರಿಂದೇನಾಯಿತೀಗ? ನಾವಿಬ್ಬರೂ ತುಂಬಾ ವಿಶ್ವಾಸವುಳ್ಳವರು. ಅದು ನಿನಗೆ ಬರುಬರುತ್ತ ಗೊತ್ತಾದೀತು."

"ಓಹೊ! ಅವನ ಬಿಡಾರದಲ್ಲಿ ಹೆಂಗುಸರಾರೂ ಇಲ್ಲವೆ?"

"ಹೆಂಗುಸರೆಂದರೆ ಯಾರು? ಇವನಿಗೆ ಹೆಂಡತಿಯಿಲ್ಲ; ತೀರಿ ಹೋಗಿ

ದ್ದಾಳೆ. ಇವನ ತಂದೆಯೊಬ್ಬ ಮನೆಯೊಳಗೇ ಇದ್ದಾನೆ; ಕುರುಡ. ಇನ್ನಿಬ್ಬರು ತಮ್ಮಂದಿರಿದ್ದಾರೆ, ಹುಡುಗರು. ಅಡುಗೇ ಕೆಲಸಕ್ಕೆ ಒಬ್ಬ ಮಲೆಯಾಳೀ ನಾಯರ್ ಇದ್ದಾನೆ. ಕಸಮುಸುರೆಗೆ ಕೆಲಸದವಳಿದ್ದಾಳೆ. ನಮ್ಮ ಕೆಲಸಕ್ಕೂ ಅವಳೇ ಒಪ್ಪಿಕೊಂಡಿದ್ದಾಳೆ. ಆ ಕೆಲಸದವಳ ಗಂಡ ನಮ್ಮ ಕಂಪೆನಿಯಲ್ಲಿಯೇ ಕೆಲಸಮಾಡುತ್ತಾನೆ. ಆಗಾಗ ಇಲ್ಲಿಗೂ ಬಂದು ಏನಾದರೂ ಕೆಲಸ ಹೇಳಿದರೆ ಮಾಡುತ್ತಾನೆ.

"ಅಂತೂ ಇಲ್ಲಿ ಸರಿಯಾದ ಹೆಂಗುಸು ನಾನೊಬ್ಬಳೇ."

"ಆದರೇನು? ಭಯವೇ? ನಾನಿಲ್ಲವೆ? ಸುತ್ತುಮುತ್ತೂ ಬೇರೆ ಮನೆಗಳಿಲ್ಲವೆ?"

"ಉಂ....ಟು. ಆದರೆ ಆ ಮುದಲಿಯಾರನ ಮಾತೂ ರೀತಿಯೂ ನನಗೇನೂ ಒಳ್ಳೆಯದಾಗಿ ಕಾಣುವುದಿಲ್ಲ."

"ಅವನು ಹಾಗೇ ಒಳಗೂ ಹೊರಗೂ ಒಂದೇ ವಿಧದವನು; ನಿಷ್ಕಳಂಕಿ. ಧರ್ಮರಾಯನಂಥವನು. ಅವನಮೇಲೆ ಇಲ್ಲದ ಸಂಶಯ ಪಟ್ಟರೆ ಕಣ್ಣು ಹೋದೀತು ಕಣ್ಣು!"

ಏನೋ ತಿಳಿಯುತ್ತದಲ್ಲ, ಎಂದುಕೊಂಡೆನು. ಅಂದಿನಿಂದ ನನ್ನ ಹೊಸ ಸಂಸಾರವು ಅಲ್ಲಿ ಪ್ರಾರಂಭವಾಯಿತು. ಆದಿನವುರುಳಿ ಮರುದಿನ ಮೂಡಿತು. ಅಡುಗೆಮಾಡುವುದೊಂದು ಕೆಲಸದ ಹೊರತು ಮತ್ತೇನೂ ಕೆಲಸವಿರಲಿಲ್ಲ ನನಗೆ. ಊಟಕ್ಕೆ ನಾನೂ ಪತಿಯೂ ಇಬ್ಬರೇ. ಬೆಳಿಗ್ಗೆ ಎಂಟು ಗಂಟೆಯ ಸಮಯಕ್ಕೆ ನನ್ನವರೂ, ಧನದಾಸಮುದಲಿಯೂ ಒಟ್ಟಿಗೇ ಕಾರಿನಲ್ಲಿ ಹೋಗುತ್ತಿದ್ದರು ಕಂಪೆನಿಗೆ. ಆ ಮೇಲೆ ಮಧ್ಯಾಹ್ನ ಒಟ್ಟಿಗೇ ಬರುತ್ತಿದ್ದರು. ಆಗಾಗ ಧನದಾಸನು ನನ್ನ ಪತಿಯೊಂದಿಗೆ ನಮ್ಮ ಬಿಡಾರದೊಳಗೆ ಬಂದು ನನ್ನೊಡನೆ ಪಟ್ಟಾಂಗ ಹೊಡೆಯುವನು. ಎರಡು ಮೂರು ದಿನಗಳುರುಳಿದ ಮೇಲೆ ಅವನೊಬ್ಬನಾಗಿಯೂ ಬಂದು ನಮ್ಮ ಬಿಡದಿಯೊಳಗೆ ಕೂತು, ನನ್ನೊಂದಿಗೆ ಏನಾದರೂ ಮಾತಾಡಲಿಕ್ಕೆ ತೊಡಗಲಾರಂಭಿಸಿದನು. ಅವನ ನೋಟ–ಮಾಟ-ರೀತಿ–ನೀತಿಗಳೊಂದೂ ನನಗೆ ಸರಳವಾಗಿ ಕಾಣಿಸಲಿಲ್ಲ. ಅವನಿಗೆ ಸುಮಾರು ಮೂವತ್ತು ವರ್ಷವಿದ್ದೀತು; ಸ್ಫುರದ್ರೂಪಿಯೂ ಹೌದು. ಇಂತಹನು ನನ್ನ ಮೇಲೆ ಅಷ್ಟು ಆಸ್ಥೆಯನ್ನಿಟ್ಟಿರುವುದೇಕೆ? ಅಷ್ಟು ಔದಾರ್ಯವನ್ನು ತೋರಿಸುವುದೇಕೆ? ಮನೆಯೂ ಅವನದೇ; ಮನೆಯ ಯಜಮಾನಿ

ಕೆಯೂ ಅವನದೇ. ನಮ್ಮಲ್ಲಿರುವ ಪಾತ್ರೆಪಡದೆಗಳೂ ಅವನದೇನೋ! ನನಗಾಗಿ ತಂದ ಈ ಸೀರೆ ಜಾಕೆಟ್ಟುಗಳು ಕೂಡಾ ಅವನ ಸ್ವಂತವೇ ಆಗಿರ ಬಹುದೇ! ನಾಲ್ಕೈದು ದಿನಗಳಲ್ಲಿ ನನಗೆ ಈ ವಿಷಯವಾಗಿ ತುಂಬ ಸಂದೇಹವೂ ಜಿಗುಪ್ಸೆಯೂ ಹೆಚ್ಚಿತು. ನನ್ನ ಪತಿಯನ್ನು ಕುರಿತು ಮೆಲ್ಲನೆ ಒಂದು ಪ್ರಸ್ತಾಪವೆತ್ತಿದೆ:— "ಅಲ್ಲಾ, ನೀವು ನಿಮ್ಮ ಕಂಪೆನಿಯ ಕೆಲಸದಲ್ಲಿ ಭಾರಿಯ ಲಾಭವಿದೆಯೆಂದಿರಲ್ಲಾ? ಬ್ಯಾಂಕಿನ ನಿಮ್ಮ ಲೆಕ್ಕದಲ್ಲೀಗ ಎಷ್ಟಿದೆ ಹಾಗಾದರೆ? "

"ಆ ಲೆಕ್ಕವೆಲ್ಲ ನಿನಗೇಕೆ? ಅದೇನು ಸಂಶಯ ಬಂತು? "

"ಸಂಶಯವೆಂದರೆ ನೀವು ಪ್ರತಿಯೊಂದಕ್ಕೂ ಅವನ ಕೈಯಿಂದಲೇ ಹಣ ತೆಗೆದುಕೊಳ್ಳುವ ಹಾಗಿದೆ ಪ್ರತಿಯೊಂದರ ಮೇಲು ವಿಚಾರವನ್ನು ಅವನೇ ಮಾಡುವಹಾಗಿದೆ? ಅದೇನು ಹಾಗೆ? "

"ಅದೇನಂದರೆ? ನನಗೆ ಈ ಸಾಂಸಾರಿಕ ವಿಷಯದಲ್ಲಿ ಅಷ್ಟು ಅನುಭವವಿಲ್ಲಾಂತ ಅವನೊಂದಿಷ್ಟು ಅಕ್ಕರೆಯಿಟ್ಟು ಮುಂದೆ ಬಂದರೆ ಏನೋ ಸಂದೇಹಪಡುವಿಯಲ್ಲಾ? ಅವನೂ ನಾನೂ ಒಂದೇ ಕಂಪೆನಿಯವರು; ನನ್ನ ಕೈಯಿಂದ ಅವನೂ ತೆಗೆದುಕೊಳ್ಳುವನು ನನಗೂ ಅವನಿಗೂ ಏನೂ ಭೇದವಿಲ್ಲವೆಂದು ತಿಳಿ. "

"ಭೇದವಿಲ್ಲವೆಂದರೆ? "

"ಅಂದರೆ ಅವನೂ ನನ್ನ ಹಾಗೆಯೇ ನಿನ್ನ ಹಿತಚಿಂತಕನೆಂದು ನಂಬು. ನಿನಗೇಕೆ ಬೇಡದ ವಿಚಾರ? ಬೇಕಾದಾಗ ಬೇಕಾದ್ದು ಸಿಕ್ಕಿದರಾಯಿತಷ್ಟೆ? "

ಹಾಗಾದರೆ ಈಗ ನನಗೆ ಆ ಐನೂರು ರೂಪಾಯಿ ಕೊಡಿರಿ. ನನ್ನ ತಂದೆಗೆ ಕಳುಹಿಸಿ ಕೊಡಬೇಕು "

"ಒಳ್ಳೇದು. ಅದಕ್ಕೇನು? ಇವತ್ತು ಸಾಯಂಕಾಲವೇ ನಿನಗೆ ಸಿಕ್ಕುತ್ತದೆ."

ಮಧ್ಯಾಹ್ನದ ಹೊತ್ತಿನಲ್ಲಿ ಹೀಗೆ ಸಂಭಾಷಣೆಯಾಗುತ್ತಿತ್ತು. ಆ ಸಮಯದಲ್ಲಿ ಆಫೀಸುಡ್ರೆಸ್ಸಿನಿಂದ ಅಲಂಕೃತನಾದ ಧನದಾಸನು ಒಳಗೆ ಹೊಕ್ಕು, ನಮ್ಮ ಸಂಭಾಷಣೆಯನ್ನು ಕೇಳಿಕೊಂಡವನ ಧೋರಣೆಯಲ್ಲಿ— "ಏನು ವೆಂಕಟೇಶ್! ಗಿರಿಜಾಬಾಯಿ ಏನು ಕೇಳುತ್ತಾರೆ? ಏನು ಬೇಕಾದರೂ ನನ್ನನ್ನು ಕೇಳಿ ಗಿರಿಜಾಬಾಯಿ!" ಎಂದು ನನ್ನ ಮೋರೆಯನ್ನು ನೋಡಿ

ನಕ್ಕನು

ನನಗೆ ಸಿಟ್ಟು ಉಕ್ಕಿಬಂತು.— “ನಿಮ್ಮನ್ನು ನಾನೇನು ಕೇಳುವುದು? ನೀವು ನನಗೇನಾಗಬೇಕು?” ಎಂದು ಸಿಡುನುಡಿದೆನು ಕೂಡಲೇ ವೆಂಕಟೇಶರು ನನ್ನನ್ನು ನೋಡಿ ಹುಬ್ಬು ಗಂಟು ಹಾಕಿ— “ಏನಿದು ಗಿರಿಜಾ! ದೊಡ್ಡ ಮನುಷ್ಯರನ್ನು ಹೀಗೆ ಎದುರಿಸಬಹುದೆ? ಏನೋ ಉದಾರಭಾವದಿಂದ ಇವರು ಕೇಳಿದರೆ ಹೀಗೋ ಉತ್ತರಕೊಡುವುದು ನೀನು? ಎಂದು ಗದರಿಸಿದರು. ನಾನು ಸರಕ್ಕನೆ ಅಡುಗೆ ಮನೆಯೊಳಗೆ ಹೊಕ್ಕುಬಿಟ್ಟೆನು. ಆಗ ಧನದಾಸನು— “ಪರ್ವಾಯಿಲ್ಲ ವೆಂಕಟೇಶ್! ಅವರಿಗೆ ಗೊತ್ತಿಲ್ಲ ನಮ್ಮ ಸಂಬಂಧವು ಎಷ್ಟರಮಟ್ಟಿಗೆ ಒಂದಾಗಿರುವುದೆಂದು!” ಎಂದನು ಬಳಿಕ ಅವರಿಬ್ಬರೂ ಹೋಗಿ ಕಾರಿನಲ್ಲಿ ಕುಳಿತರು. ಕಾರು ಹೊರಟುಹೋದ ಶಬ್ದವು ಕೇಳಿತು.

ಈ ಲಕ್ಷಣವೆಲ್ಲ ನನಗೆನೂ ಒಳ್ಳೆಯದಾಗಿಕಾಣಿಸಲಿಲ್ಲ. ಮತ್ತೆ ಚಿಂತಿಸುವುದೇ ನನ್ನ ಹಣೆಯಲ್ಲಿ ಬರೆದಿರುವಂತೆ ತೋರಿತು. ಚಿಂತಿಸುತ್ತ ಬಹಳ ಹೊತ್ತು ಹಾಗೇಯೇ ಕುಳಿತಿದ್ದೆನು. ಆಗ ಪಕ್ಕದ ಕೋಣೆಯಲ್ಲಿ ಏನೋ ಗಾಜಿನವಸ್ತು ಕೆಳಗೆ ಬಿದ್ದಂತೆ ‘ಠಣಕ್ಕೆಂ’ಬ ಸದ್ದಾಯಿತು. ಕೂಡಲೇ ಮುದುಕನು— “ಏ ತುಂಗೂ! ತುಂಗೂ! ಇಲ್ಲಿ ಬಾಬ್ಬಾ! ಏನೋ ಮೇಜಿನಿಂದ ಕೆಳಗೆ ಬಿತ್ತು. ಏನೂಂತ ನೋಡು” ಎಂದು ಕೂಗಿ ಹೇಳಿದನು.

ನಾನು ಕುತೂಹಲದಿಂದ ಮೇಜಿಯ ಮೇಲೆ ಹತ್ತಿ, ಕಿಟಕಿಯ ಸಂದಿನಲ್ಲಿ ಇಣಿಕಿ ಅತ್ತ ನೋಡಿದೆ. ಅಲ್ಲಿ ಮೇಜಿಯ ಮೇಲಿದ್ದೊಂದು ಫೋಟೋ ಆ ಕುರುಡನ ಕೈತಾಗಿಯೋ ಏನೋ ಕೆಳಗೆ ಬಿದ್ದು ಅದರ ಕನ್ನಡಿ ಒಡೆದು ಹೋಗಿತ್ತು. ಅದನ್ನು ಆಗಲೇ ಓಡಿ ಬಂದಿದ್ದ ತುಂಗೂ ಎತ್ತಿಕೊಂಡು— “ಅಯ್ಯಯ್ಯೋ ಏನುಮಾಡಿಬಿಟ್ರೀ ತಾತಾ! ಇಲ್ಲ್ಯಾಕ ಬಂದಿರಿ? ಈ ಫೋಟೋ ಒಡೆದೋಯ್ತಲ್ಲಾ! ಅಯ್ಯ ನೋಡಿದರೆ ಕಂಡಾಬಟ್ಟೆ ಬಯ್ತಾರು! ಈ ಫೋಟೋಂದ್ರೆ ಅವರ ಪ್ರಾಣ!” ಎಂದಳು. ಮುದುಕನು “ಯಾರ ಫೋಟೋವೇ ಇದು ಅಂಥಾದ್ದು?” ಎಂದು ಕೇಳಿದನು. ಈ ಪಕ್ಕದ ಕೋಣೇಲಿ ಬಿಡಾರ ಬಂದಿದ್ದಾರಲ್ಲ ತಾತಾ?— ಅವರದು!” ಎಂದು ಹೇಳುವಾಗ, ತುಂಗೂನ ಮುಖದಲ್ಲಿ ಕೊಂಕುನಗೆ ಕಾಣಿಸಿತು. “ಅದರಲ್ಲಿ ಪ್ರಾಣ

ವನ್ನೆ ಇಡಲಿಕ್ಕೆ ಏನಿದೆಯೆ? ಬೇರೆ ಕನ್ನಡಿ ಹಾಕಿಸಿದರಾಯಿತು. ನೋಡು, ಕೆಳಗೆಲ್ಲಾ ಗಾಜಿನಪುಡಿ ಚೆಲ್ಲಿದ್ದೀತು, ಜಾಗ್ರತೆ ತೆಗೆದು ಬಿಸಾಡು." ಎಂದಂದು ಮುದುಕನು ಒಳಕ್ಕೆ ಹೋಗಿಬಿಟ್ಟನು. ತುಂಗೂ ಆ ಒಡೆದ ಫೋಟೋವನ್ನು ಕೈಯಲ್ಲಿ ಹಿಡಿದುಕೊಂಡು, ತನ್ನ ಗಂಡನನ್ನು ಕರೆದಳು. ಅವನೂ ಬಂದನು. ತುಂಗು ಅವನನ್ನುಕುರಿತು, ನೋಡಿದಿಯಾ? ತಾತ ಈ ಫೋಟೋನ ಒಡೆದುಹಾಕಿದ. ನಾನು ಕಸಬಳಿಯುವಾಗ ನಾನೇ ಇದನ್ನು ಕೆಳಗೆ ಹಾಕಿ ಒಡೆದೆನೆಂದು ಅಯ್ಯ ನನ್ನ ಮೇಲೆಯೇ ತಪ್ಪುಹೊರಿಸಿ ಬಯ್ದಾನು. ಏನು ಮಾಡೋಣ?" ಎಂದು ಯೋಚನೆ ಕೇಳಿದಳು. "ಅಯ್ಯಯ್ಯೋ! ಅವರಿಗೆ ತುಂಬ ಸಿಟ್ಟುಬರುವಂಥ ಫೋಟೋವೇ ಇದು! ತಾ, ನಾನೀಗಲೇ ಬಜಾರಿಗೆ ಹೋಗಿ ಹೊಸಕನ್ನಡಿ ಹಾಕ್ಸಿಕೊಂಡು ಬಂದು ಬಿಡ್ತೇನೆ" ಎಂದಂದು ಅವಳ ಗಂಡನು ಆ ಫೋಟೊವನ್ನು ಎತ್ತಿಕೊಂಡು ಬಜಾರಿಗೆ ಹೋದನು.

೪

ನಾನುಕೂಡಲೇ ಸನ್ನೆಮಾಡಿ ತುಂಗೂವನ್ನು ಕರೆದೆನು. ಅವಳು ಬಂದು "ಏನಮ್ಮಾ?" ಎಂದು ಕೇಳಿದಳು.

"ತುಂಗೂ, ಅದು ಯಾರ ಫೋಟೊವೆ?" ಯಾರದೆಂದು ನನಗೆ ಗೊತ್ತಿದ್ದೂ ನಾನು ಕೇಳಿದೆ. ಹಿಂದೆ ನನಗೆ. ಮದುವೆಯಾದಾಗ ಪತಿ ಯೊಂದಿಗೆ ನನ್ನದೊಂದು ಫೋಟೋ ಹಿಡಿಯಲ್ಪಟ್ಟಿತ್ತು. ಅದರ ಒಂದು ಪ್ರತಿ ವೆಂಕಟೇಶರ ಕೈಯಲ್ಲಿತ್ತು. ಆ ಫೋಟೋವೇ ಈಗ ಹಾಗೆ ಧನ ದಾಸನ ಮೇಜಿಯ ಮೇಲೇರಿತ್ತು. ಏನರ್ಥ?

ತುಂಗೂ ಹಿಂದೆ ಮುಂದೆ ನೋಡುತ್ತ— "ಯಾ........ಕಮ್ಮ?"

"ಅಂದರೆ ತುಂಗಾ, ಅದೇನೋ ನಮ್ಮದೇ ಫೋಟೋ ಇದ್ದಹಾಗೆ ತೋರಿತು. ನಾನೆಲ್ಲ ಈ ಕಿಡಿಕಿಯಿಂದ ನೋಡಿದೆ; ಅದು ಅಲ್ಲಿಗೆ ಹ್ಯಾಗೆ ಬಂತು ನಿನಗೆ ಗೊತ್ತೆ?"

"ನನಗೆ........ಏನು ಗೊತ್ತಮ್ಮ?"

"ವಿಶ್ವಾಸದಲ್ಲಿ ನಿನ್ನನ್ನು ಕರೆದು ಕೇಳುತ್ತೇನೆ ತುಂಗಾ; ಗೊತ್ತಿದ್ದರೆ ನನಗೆ ತಿಳಿಸಮ್ಮ."

ನಿಮ್ಮ ಗಂಡನೇ ನಮ್ಮ ಅಯ್ಯನಿಗೆ ಕೊಟ್ಟಹಾಗಿದೆ"

ಹೌದು ಮತ್ತೆ. ಅವರು ಕೊಡದಿದ್ದರೆ ಅವನಿಗೆ ಹೇಗೆ ಸಿಕ್ಕೀತು ? ತುಂಗಾ ನಾನು ನಿನ್ನನ್ನು ನಂಬಿ ಮಾತಾಡಬಹುದೊ. ನನ್ನ ಹೊಟ್ಟೆಯೊಳಗೆ ಒಂದೆರಡು ಸಂದೇಹವುಂಟು; ನಿನ್ನ ಮುಂದೆ ಹೇಳಬಹುದೊ. ”

ಈಗ ತುಂಗಾಗೆ ನನ್ನ ಮೇಲೆ ಸಹಾನು ಭೂತಿಯುಂಟಾಯಿತೆಂದು ತೋರುತ್ತದೆ “ಹೇಳೀಅಮ್ಮ. ನಾನು ಅಂಥವಳಲ್ಲ. ನಿಮ್ಮನ್ನು ನೋಡಿದರೆ ನನಗೂ ಏನೋ ಸಂ ಟವೆನಿಸುತ್ತದೆ. ”

“ನೀನಿಲ್ಲಿ ಎಷ್ಟುವರ್ಷದಿಂದ ಕೆಲಸ ಮಾಡುತ್ತಿಯಮ್ಮ ? ”

“ ಸುಮಾರು ಒಂದು ವರ್ಷದಿಂದ ನನ್ನ ಗಂಡ ನಾಲ್ಕೈದು ವರ್ಷದಿಂದ ಇವರ ಕಂಪೆನಿಯಲ್ಲಿಯೇ ಇದ್ದಾನೆ. ”

“ಒಹೊ! ಹಾಗಾದರೆ ನನ್ನ ಗಂಡನ ವಿಷಯವೆಲ್ಲ ನಿನಗೆ ಗೊತ್ತಿರಬಹುದಲ್ಲವೇ ? ನನ್ನ ಗಂಡ ಇವರ ಕಂಪೆನಿಯಲ್ಲಿ ಏನು ಕೆಲಸ ಮಾಡ್ತಾರೆ ತುಂಗೂ ? ”

“ ಈಗೇನೂ ಕೆಲಸ ಮಾಡೋದಿಲ್ಲಂತಮ್ಮ! ಮಹಾರಾಜರಹಾಗಿದ್ದಾರಂತೆ ! ”

“ ಹಾಗಂದರೆ ? ”

“ ಅಂದರೆ ಇವರು ಮೊದಲುಮೊದಲು ಇವರ ಕಂಪನೀಲಿ ಏನೋ ಸಾಮಾನು ಕಟ್ಟುವ ಚಿಲ್ರೆಪಲ್ರೇ ಕೆಲಸಕ್ಕೆ ಸೇರಿದ್ರಂತೆ; ತಿಂಗಳಿಗೆ ಹದಿ-ನೈದೋ ಇಪ್ಪತ್ತೊ,ಅಂದರೆ ನನ್ನಗಂಡನಿಗೂ ಇಪ್ಪತ್ತು ರೂಪ್ಯಾ ಸಂಬ್ಳಾಮ್ಮ; ಅದೇ ಸಂಬಳ ಇವರಿಗೂ, ಈಗೊಂದು ಹದಿನೈದಿಪ್ಪತ್ತು ದಿನಗಳಿಂದ ನಿಮ್ಮ ಗಂಡನೂ, ನಮ್ಮ ಅಯ್ಯನೂ ಅಷ್ಟು ಅಚ್ಚು ಮೆಚ್ಚೂಂದ್ರೆ ಅಷ್ಟು ಅಚ್ಚುಮೆಚ್ಚಾಗಿಬಿಟ್ಟದ್ದಾರೆ! ನಿಮ್ಮ ಗಂಡನಿಗೆ ಯಾವ ಕೆಲಸವೂ ಇಲ್ಲ ಈಗ. ಅವರ ಪ್ರಾಣಸ್ನೇಹಿತರ ಹಾಗೆ ಆಗಿಬಿಟ್ರು! ನಿಮ್ಮವರು ಕೇಳಿದಾಗ ಕೇಳಿದಷ್ಟು ರೂಪಾಯಿ ಕೊಡ್ತಾರಂತಮ್ಮ! ನಿಮ್ಮ ಈ ಸೀರೆಗೀರೆ....... ”

“ ಅಯ್ಯೋ! ಇದೆಲ್ಲವೂ ಆ ಧನದಾಸಂದೇ ಏನು ? ”

“ ಅಂತಲೇ ನನಗೆ ಕಾಣುತ್ತಮ್ಮ. ”

“ ಯಾಕೆ ತುಂಗೂ ಹೀಗೆ ? ಕಾರಣ ... ... ”

“ ಗೊತ್ತಾಗೋದಿಲ್ಲವೇನಮ್ಮಾ ? ನಾನೇನು ಹೇಳ್ಲಿ ? ”

“ ಏನೋ ಸಂಶಯವಾಗಿಯೇ ನಿನ್ನೊಡನೆ ಕೇಳುತ್ತೇನೆ ತುಂಗೂ!

ನೀನೂ ನನ್ನ ಹಾಗೆಯೇ ಹೆಂಗುಸಲ್ಲವೆ ? "

" ಅಯ್ಯೋ ಅಮ್ಮ ! ನಾನೊಂದು ಕೇಳಲಿಯಾ ತಾಯಿ ? ಸಿಟ್ಟು ಮಾಡಬಾರದು ! "

" ಇಲ್ಲ ಏನು ಕೇಳಮ್ಮ "

" ನಿಜವಾಗಿಯೂ ಇವರು ನಿಮ್ಮನ್ನು ವಿಧಿಪ್ರಕಾರ ಮದುವೆ ಮಾಡಿಕೊಂಡ ಗಂಡನೇ ಏನೂಂತ ? "

" ಯಾಕಮ್ಮ ಹೀಗೆ ಕೇಳುತ್ತಿ ? "

" ಅವರು ನಿಜವಾಗಿಯೂ ನಿಮ್ಮ ಗಂಡನಾದರೆ ಈ ಬಿಡಾರದಲ್ಲಿ ನಿಮ್ಮನ್ನು ಇರಗೊಡಿಸುತ್ತಿದ್ದಿಲ್ಲಾಂತ "

" ನಿಜವೇ ತುಂಗು; ಆದರೂ ಇವರು ನನ್ನನ್ನು ಮದುವೆ ಮಾಡಿಕೊಂಡ ಗಂಡನೂ ನಿಜ ತುಂಗು, ಸತ್ಯಹೇಳು; ಈ ಮನೆಯಾತನ ಗುಣ ಹ್ಯಾಗಮ್ಮ ? "

ಇನ್ನೂ ಏನು ಕೇಳ್ತೀರಮ್ಮಾ ಅದನ್ನು ? ಸಂಶಯವಾಗಿದೆಯಲ್ಲವೇ ನಿಮಗೆ ? ಬಹಳ ಪೋಕ್ರಿಯಮ್ಮ. ಪಕ್ಕಾ ಹೆಣ್ಣುಮರುಳ ! ನೋಡಿ ಸತ್ಯ ಹೇಳ್ತೀನೆ; ನಾನು ಕಪ್ಪಗಾಗಿ ಸೊಟ್ಟ ಮೂತಿಯವಳಾಗಿದ್ದರಿಂದಲೇ ಇವರ ಬಲೆಗೆ ಬೀಳದಿದ್ದೇನೆ ! ಇಲ್ಲದಿದ್ದರೆ ! ಅಮ್ಮ ! ಏನೋ ಹೊಟ್ಟೆಯ ಪಾಡಿಗಾಗಿ ಇಂಥವರ ಮನೇಲಿ ಕೆಲ್ಸಾ ಮಾಡ್ತೇನೆ. ನಿಮ್ಮನ್ನು ನೋಡಿ ನಾನು ಮೊದಲು ಏನೋ ಅಂತ ತಿಳಿದೆ ಈಗ ನಿಮ್ಮ ಮುಖವನ್ನೂ ನಿಮ್ಮ ಭಯ ಸಂಶಯಗಳನ್ನೂ ನೋಡಿದರೆ ನೀವು ಪಾಪ, ಅಂಥವರಾಗಿ ಕಾಣುವದಿಲ್ಲಮ್ಮ. ಇಂಥ ನಿಮ್ಮನ್ನು ಇಂಥಾ ಗಂಡನಿಗೆ ಹೇಗೆ ಕೊಟ್ಟರಮ್ಮ ? "

" ನನ್ನ ಹಣೇಬರಹವನ್ನೇನು ಹೇಳಲಿ ತುಂಗೂ ? ಇವರೇನೋ ತಾನು ದೊಡ್ಡ ಕೆಲಸದಲ್ಲಿದ್ದೇನೆ, ಮನೆಗಿನೆ ಎಲ್ಲಾ ಮಾಡಿದ್ದೇನೆ ಅಂತ ಹೇಳಿ ನನ್ನನ್ನು ನಂಬಿಸಿ ಕರಕೊಂಡು ಬಂದು ಬಿಟ್ಟರು. "

" ನಿಮ್ಮ ತಂದೆ–ತಾಯಿ ಎಲ್ಲಿದ್ದಾರಮ್ಮ ? "

" ಈ ಊರಿನಲ್ಲಿಯೇ ಇದ್ದಾರೆ. ಅವರೊಡನೆ ಕೂಡ ಸಿಟ್ಟು ಮಾಡಿಕೊಂಡು ನಾನು ಗಂಡನೇ ಗತಿಯೆಂದು ಇವರೊಡನೆ ಬಂದುಬಿಟ್ಟೆ ! "

" ಅಯ್ಯೋಪಾಪವೆ! ಹೀಗೂ ನಿಮ್ಮನ್ನು ಮೋಸಪಡಿಸಿಬಿಟ್ಟರೇ ನಿಮ್ಮ ಗಂಡ! ಅಯ್ಯಯ್ಯೋ! ಅಮ್ಮ! ಇಲ್ಲಿ ನಿಮ್ಮ ವಿಷಯವಾಗಿ ಎಂತೆಂಥ ಕಥೆ

ನಡೆಯಿತು ಗೊತ್ತೇ ? ”

“ ಏನು ನಡೆಯಿತು ತುಂಗಾ ? ಎಲ್ಲಾ ಬಿಡಿಸಿ ವಿವರವಾಗಿ ಹೇಳಮ್ಮ. ಇಲ್ಲೇ ಕೆಲಸ ಮಾಡುವವಳಾದ ನಿನಗೆ ಎಲ್ಲವೂ ಗೊತ್ತಿದ್ದೀತು ”

“ ಗೊತ್ತೂಂದರೆ ನಾನೇನೂ ಕಿವಿಯಾರೆ ಕೇಳಿದ್ದಲ್ಲಮ್ಮ. ನನ್ನ ಗಂಡನಿಗೆಲ್ಲಾ ಗೊತ್ತು. ಅವನೇ ಈ ಸಂಗತಿಯಲ್ಲ ನನಗೆ ಹೇಳಿದ್ದು. ನಿಮ್ಮನ್ನು ನೋಡಿದರೆ ನನ್ನ ಗಂಡನಿಗೆ ಕೂಡಾ ಕಷ್ಟ ಕಾಣುತ್ತದೆ. ಕೇಳೀ ಅಮ್ಮ. ಈ ಧನದಾಸಮುದಲಿಯಾರ್ರದು ದೊಡ್ಡ ವ್ಯಾಪಾರ. ಬಹಳ ಲಾಭ ಹೊಡೆದು ಭಾರೀ ಹಣಗಳಿಸಿದ್ದಾರೆ. ಇವರ ಕಂಪನಿಯಲ್ಲಿ ನಿಮ್ಮ ಗಂಡ ವೆಂಕಟೇಶರು ಸಾಮಾನು ಕಟ್ಟುವ ಕೆಲಸಕ್ಕೆ ಸೇರಿದರಂತೆ. ಮೊನ್ನೆ ಮೊನ್ನೆಯವರೆಗೂ ಅದೇಕೆಲಸಮಾಡುತ್ತಿದ್ದರು. ತಂಗವೇಲುಬೀದೀಲಿ ಒಬ್ಬಳು ಸೂಳೀ ಮನೇಲಿ ಒಂದುಕೋಣೆ ಬಾಡಿಗೆ ಮಾಡಿಕೊಂಡು ಮೊನ್ನೆ ಮೊನ್ನೆವರೆಗೂ ಅಲ್ಲೇ ಇದ್ದರುನೋಡಿ ಈಗೊಂದು ಹದ್ನೈದಿಪ್ಪತ್ತು ದಿನಗಳ ಕೆಳಗೆ ಅವರಿಗೇನೋ ಒಂದು ನೋಟೀಸು ಬಂತಂತೆ. ಆಗ ವೆಂಕಟೇಶರು ಕಂಪೆನಿಯಲ್ಲಿದ್ದದ್ದರಂದ ಆ ಬಿಡಾರದ ಯಜಮಾನತಿ ಆ ನೋಟೀಸನ್ನು ಅಲ್ಲಿಗೆಕಳಿಸಿದಳು ಅಲ್ಲಿ ಧನದಾಸರ ಎದುರಿನಲ್ಲಿಯೇ ಆ ನೋಟೀಸು ಓದಿದರಂತೆ. ಅದು ವೆಂಕಟೇಶರ ಹೆಂಡತಿ ಮದುವೇನ ರದ್ದುಮಾಡಿ ಹಾಗೆ ನೋಟೀಸು ಕೊಟ್ಟಿದ್ದಂತೆ. ಹೌದೇತಾಯಿ ? ”

ನಾನು “ ಹೌದು. ಹೌದು. ಮುಂದೇನಾಯಿತು ? ” ಎಂದು ಕೇಳಿದೆ.

“ ಆಗತಾನೇ ವೆಂಕಟೇಶರಿಗೆ ಮದುವೆ ಯಾಗಿರುವ ಸಂಗತಿ ಧನದಾಸರಿಗೆ ಗೊತ್ತಾದದ್ದು. ಅವರಹೆಂಡತಿ ತಿರುವಲ್ಲಿ ಕೋಣೇಲಿರುವಳೆಂತಲೂ, ಅವಳ ಹೆತ್ತವರು ಅವಳನ್ನು ಗಂಡನೊಂದಿಗೆ ಕಳಿಸದೆ ಮನೆಯಲ್ಲೇ ಇಟ್ಟುಕೊಂಡಿದ್ದಾರೆಂತಲೂ, ಅವಳೊಂದು ಸ್ಕೂಲಿನಲ್ಲಿ ಟೀಚರ್ ಮಾಡ್ತಾಳೆಂತಲೂ ವೆಂಕಟೇಶರು ಹೇಳಿದರಂತೆ. ಅಷ್ಟೇಅಲ್ಲಮ್ಮ: ನಿಜವೋ ಸುಳ್ಳೋ..... .. ” ಎಂದು ಅವಳು ಮುಂದೆ ಹೇಳಲು ಸ್ವಲ್ಪ ಶಂಕಿಸಲು, ನಾನು ಒತ್ತಾಯ ಪಡಿಸಿದೆನು. ಆಗ ಅವಳು ಮುಂದುವರಿಸಿದಳು:—

“........ಆ ಸ್ಕೂಲಿನಲ್ಲಿ ಈ ವೆಂಕಟೇಶರ ಹೆಂಡತಿ ಆ ಸ್ಕೂಲಿನ ಯಜಮಾನನೊಂದಿಗೆ ಕಳ್ಳಸಂಬಂಧ ಬೆಳೆಸಿಕೊಂಡಿದ್ದಳಂತೆ. ಅದು ನಾಲ್ಕುಜನಕ್ಕೆ

ಗೊತ್ತಾಗಿ ಮರ್ಯಾದೆ ಹೋಗುವ ಸಂದರ್ಭ ಬಂದದ್ದರಿಂದ, ಆ ಯಜಮಾನನೇ ಅವಳನ್ನು ಮದುವೆಮಾಡಿಕೊಳ್ಳುವೆನೆಂದು ಮಾಡಿದ್ದರಿಂದ, ಅವಳು ಮೊದಲನೇಗಂಡನಿಗೆ ಹಾಗೆ ರಿಜಿಸ್ಟ್ರೀಮಾಡಿ ನೋಟೀಸು ಕಳಿಸಿದಳಂತೆ!........"

"ಅಯ್ಯಯ್ಯೋ! ಹೀಗೆಲ್ಲಾ ವರ್ತಮಾನವೇ ಇಲ್ಲಿ ?"

"ವರ್ತಮಾನಾಂದರೆ ? ಧನದಾಸರಮುಂದೆ ನಿಮ್ಮ ಗಂಡನೇ ಹೀಗಂದದ್ದಂತೆ! ನನಗೀಗ ನಿಮ್ಮನ್ನು ನೋಡುವಾಗ ಎಲ್ಲಾ ಸುಳ್ಳಂತ ಕಾಣುತ್ತದೆ ಕೆಟ್ಟವರ ಬಾಯಿಯಲ್ಲಿ ಕೆಟ್ಟಮಾತಲ್ಲದೆ ಒಳ್ಳೇ ಮಾತು ಬಂದೀತೇ ಅಮ್ಮ ?"

"ಹೇಳು ತುಂಗೂ ಹೇಳು; ಮತ್ತೇನಾಯಿತು ? ಇವರ ಮೋಸವನ್ನೆಲ್ಲಾ ನೀನು ಹೇಳಿದರೆ ನನ್ನನ್ನು ಕಾಪಾಡಿದ ಪುಣ್ಯವು ನಿನಗೆ ಬಂದೀತು ತುಂಗೂ."

"ನಾನು ಹೇಳಿದೇಂತ ಗೊತ್ತಾಗದಹಾಗೆ........"

"ಅಯ್ಯೋ ಅದನ್ನು ನನಗೆ ಹೇಳಬೇಕೆ ? ನಿನಗೇನೂ ತೊಂದರೆ ಬಾರದಂತೆ ನೋಡಿಕೊಳ್ಳುತ್ತೇನಮ್ಮ."

"ಅದೇ ಅಮ್ಮ, ಆ ನೋಟೀಸಿನ ಮುಖಾಂತರ ನಿಮ್ಮ ಕತೆಯೆಲ್ಲಾ ಹಾಗೆ ಹೊರಗೆ ಬಂತಷ್ಟೇ ? ಆಗ ಧನದಾಸರು ವೆಂಕಟೇಶರನ್ನು ನೋಡಿ. 'ನಿಮ್ಮ ಹೆಂಡತಿ ಬಹಳ ಚೆನ್ನಾಗಿದ್ದಾಳೆಯೋ ?' ಅಂತ ಕೇಳಿದರರಿತೆ ಹೊಲಸು ಬಾಯಿ ಅಮ್ಮ ಅವರದು. ವೆಂಕಟೇಶರು ನಾಚಿಗೆ ಇಲ್ಲದೆ 'ರಂಬೇ ಹಾಗಿದ್ದಾಳೆ; ನೋಡಿದಿರಾ' ಅಂತ, ಅವರ ಹತ್ತಿರವೇ ಇದ್ದ ಫೋಟೋನ ತೆಗೆದು ತೋರಿಸಿದರಂತೆ. ಆ ಮೇಲೆ ನೋಡೀ ಆ ಧನದಾಸ–ವೆಂಕಟೇಶರು ಒಂದೇ ಅಚ್ಚು ಮೆಚ್ಚು ! ಗುಸುಗುಸೂಂತ ಏನೇನೋ ಮಾತಾಡಿಕೊಂಡರಂತೆ. ಇಬ್ಬರೂ ವಕೀಲರಲ್ಲಿಗೆ ಹೋಗಿ, ಇವರೂ ಏನೋ ನೋಟಿಸು ಕೊಟ್ಟರಂತೆ. ಆ ಮೇಲೆ ವೆಂಕಟೇಶರಿಗೆ ಸಾಮಾನು ಕಟ್ಟುವಂಥ ಕೆಲಸ-ಗಿಲಸ ಏನೂ ಇಲ್ಲ. ಆಫೀಸಿನ ಕೋಣೇಲಿ ಕೂತುಕೊಂಡು, ಯಾವಾಗಲೂ ಸಿಗರೇಟು ಸೇದೋದೇ ಕೆಲಸ. ಅವರು ಕೇಳಿದ ಹಾಗೆ ಇವರು ಹಣಕೊಡುತ್ತಾರಂತೆ. ಒಟ್ಟಾರೆ ನಿಮ್ಮ ಗಂಡ ನಿಮ್ಮನ್ನು ಮೋಸಪಡಿಸಿ ಕರಕೊಂಡು ಬಂದರೂಂತ ಕಾಣುತ್ತದೆ.

"ಹೌದು, ತುಂಗೂ ಹೌದು. ಇಷ್ಟು ಕೆಟ್ಟು ಹೋಗಿರುವರೆಂತ ನಾನು ಯೋಚಿಸಿಯೇ ಇಲ್ಲ. ಇವರ ಮಾತನ್ನು ಪೂರಾ ನಂಬಿ ನನ್ನ ತಂದೆ ಹೇಳಿದ ಬುದ್ಧಿಮಾತನ್ನೆಲ್ಲ ಅಲಕ್ಷ್ಯಮಾಡಿ ಇವರೊಡನೆ ಇಲ್ಲಿಗೆ ಬಂದು ಕೆಟ್ಟೆನಲ್ಲ ತುಂಗು?"

"ಹಾಗನ್ನ ಬೇಡಿ ಅಮ್ಮ, ನಿಮ್ಮಂತವರಿಗೆ ದೇವರು ಸಹಾಯ ಮಾಡುತ್ತಾರೆ. ಏನೋ ಈ ಮದರಾಸಿನಲ್ಲಿ ಹಾಳು ಜನರ ಸಹವಾಸವಮ್ಮ. ನೀವು ಕೈಕಾಲುಗೆಟ್ಟು ಕಂಗಾಲಾಗಿ ಬಿಡಬೇಡಿ. ನಿಮ್ಮ ಗಂಡನನ್ನು ಒಳ್ಳೇ ದಾರಿಗೆ ತರುವ ಪ್ರಯತ್ನಮಾಡಿ. ಮೊದಲು ಈ ಬಿಡಾರದಿಂದ ಬೇರೆಲ್ಲಿಗಾದರೂ ಹೋಗಿ."

"ಹೌದು ತುಂಗೂ. ಈ ಗುಟ್ಟನ್ನೆಲ್ಲ ಹೇಳಿ ನೀನು ನನಗೆ ದೊಡ್ಡ ಉಪಕಾರವನ್ನು ಮಾಡಿದಿ. ನಿನಗೆ ಹೊತ್ತಾಯಿತು; ಇನ್ನು ಹೋಗಮ್ಮ."

ತುಂಗೂ ನನಗೆ ಮತ್ತೆರಡು ಧೈರ್ಯದ ಮಾತುಗಳನ್ನು ಹೇಳಿ ಹೊರಟುಹೋದಳು. ಮತ್ತೆ ನಾನು ಯೋಚನೆಯ ಮಡುವಿನಲ್ಲಿ ಬಿದ್ದು ತೊಳಲಾಡತೊಡಗಿದೆ. ಇಷ್ಟು ಸಂಕಟಕರವಾದ ಕೂಪದಲ್ಲಿ ನಾನು ಇದುವರೆಗೂ ಬಿದ್ದಿರಲಿಲ್ಲ. ಈಗ ... ...? ಅದೆಂತಹ ದುಷ್ಟಲಾಂಛನವು ನನ್ನನ್ನು ಅಂಟಿಕೊಂಡು ಬಿಟ್ಟಿತು! ತನ್ಮೂಲಕ ಎಂತಹ ಗಂಡಾಂತರವು ಕಳಚಿ ಬೀಳಲು ಕಾದಿದೆ! ಓಡಿಹೋಗಲೆ? ಎಲ್ಲಿಗೆ? ಮತ್ತೆ ಹೆತ್ತವರಲ್ಲಿಗೆ? ಹೇಳದೆ ಹೊರಟುಬಂದು ಮತ್ತೆಯಾವ ಮೋರೆಯಿಂದ ಅಲ್ಲಿಗೆ ಹೋಗಲಿ? ಆದರೆ......ತುಂಗು ಹೇಳಿದ ಕಡೆಯಮಾತು ನನ್ನನ್ನಿಷ್ಟು ಹಿಡಿದು ಕೊಂಡಿತು. ಅವಳು ಹೇಳುವಂತೆ ಮೊದಲು ಈ ಬಿಡಾರದಿಂದ ಹೊರಟು ಹೋಗುವ ಹಂಚಿಕೆಯನ್ನು ತೆಗೆಯುವ; ಗಂಡನನ್ನು ಸನ್ಮಾರ್ಗಕ್ಕೆ ಹಚ್ಚುವ ಪ್ರಯತ್ನವೇನಾಗುವುದೋ ನೋಡುವ. ಎಷ್ಟಾದರೂ ನನ್ನನ್ನು ಮುಟ್ಟಿ ತಾಳಿಕಟ್ಟಿದ ಪತಿ; ಕಡೆತನಕವೂ ಪರೀಕ್ಷಿಸಿ ನೋಡಿ, ಅನಂತರ ಮುಂದಿನ ಶೂನ್ಯದಾರಿಗೆ ಧುಮುಕಿದರಾಯಿತು ... ..

ನಾನು ಉಟ್ಟಿರುವ ಸೀರೆ ಮೊದಲಾದುವು ಆ ನೀಚ ಧನದಾಸನವೆಂದು ಖಂಡಿತ ಗೊತ್ತಾದುದರಿಂದ, ಯಾವುದೋ ಕೊಳಕಿನ ಬಟ್ಟೆ ಎಂಬಂತೆ ಅದನ್ನು ಬೇಗ ಬೇಗನೆ ಬಿಚ್ಚಿ ಮೂಲೆಗೆ ಹಾಕಿ, ನನ್ನ ಸ್ವಂತ ಸೀರೆಯನ್ನು ಉಟ್ಟುಕೊಂಡೆನು. ಜಿಗುಪ್ಸೆ ಭಾವನೆಯಿಂದಲೇ ರಾತ್ರಿ ಒಂದು ಸಣ್ಣ

ಅಡುಗೆಯನ್ನೂ ಮಾಡಿದೆ. ಹೀಗೆಯೇ ಆ ಹಗಲು ಕಳೆದು ರಾತ್ರಿ ತಲೆ ಹಾಕಿತು.

೧೫

ರಾತ್ರಿ ಸುಮಾರು ಎಂಟುಗಂಟೆಯ ಸಮಯಕ್ಕೆ, ಅಂಗಳಲ್ಲಿ ಮೋಟಾರುಕಾರು ಬಂದುನಿಂತ ಸದ್ದಾಯಿತು. ವೆಂಕಟೇಶರೂ ಧನದಾಸರೂ ಬಂದರೆಂದು ಭಾವಿಸಿದೆ. ಆದರೆ ಕಾರಿನಿಂದ ಧನದಾಸನೊಬ್ಬನೇ ಕೆಳಗಿಳಿದುದು ತೋರಿತು. ಇಳಿದು ಅವನು ಡ್ರೈವರನನ್ನು ಕುರಿತು, ಒಂಭತ್ತುವರೆ ಗಂಟೆಗೆ ಬಾ; ವೆಂಕಟೇಶರನ್ನು ಕರೆದುಕೊಂಡು ಬರಬೇಕು." ಎಂದು ಆಜ್ಞಾಪಿಸಿದ್ದನ್ನೂ ನಾನು ಕೇಳಿದೆನು.

"ಸರಿ ಸಾರ್" ಎಂದೆಂದು ಡ್ರೈವರನು ಹೊರಟು ಹೋದನು.

ಬಳಿಕ ಧನದಾಸನು ಸೀದಾ ನನ್ನ ಬೀಡಾರದೊಳಗೇ ನುಗ್ಗುವುದನ್ನು ಕಂಡು, ಯಾಕೋ ನನ್ನ ಕೈ, ಸೆರಗಿನಿಂದ ನಡುವನ್ನು ಬಿಗಿದುಕೊಂಡಿತು ಧನದಾಸನು ಡ್ರಾಯಿಂಗ್ ರೂಮಿನಲ್ಲಿದ್ದ ಕುರ್ಚಿಯಲ್ಲಿ ಕುಳಿತುಕೊಂಡು—"ಏನು ಗಿರಿಜಾಬಾಯಿ, ಅಡುಗೆ ಆಯ್ತೆ?" ಎಂದನು ನಗುತ್ತ.

ಅಡುಗೆ ಮನೆಯ ಹೊಸ್ತಿಲಮೇಲೆ ನಿಂತವಳು ನಾನು ಹಾಗೇ ನಿಂತು, "ಹುಂ ಅವರೆಲ್ಲಿ?"

"ಅವರಿಗೆ ಆಫೀಸಿನಲ್ಲಿ ಇವತ್ತು ಸ್ವಲ್ಪ ಸ್ಪೆಶಲ್ ಕೆಲಸವಿತ್ತು. ಹತ್ತು ಗಂಟೆಯಾದೀತು ಬರಲಿಕ್ಕೆ. ಆಗ ನನ್ನ ಡ್ರೈವರ್ ಬಂದು ಕಾರು ತೆಗೆದು ಕೊಂಡು ಹೋಗುತ್ತಾನೆ. ಅದಿರಲಿ, ಗಿರಿಜಾಬಾಯಿ! ನೀವು ನಿಮ್ಮ ತಂದೆಗೆ ಐನೂರು ರೂಪಾಯಿ ಕಳುಹಿಸಬೇಕಂತ ಹೇಳಿದ್ದೀರಂತಲ್ಲಾ? ಇಕ್ಕೊಳ್ಳಿ, ಇದನ್ನು ತೆಗೆದಿಡಿ!" ಎಂದು ಅವನು ಜೇಬಿನಿಂದೊಂದು ನೋಟುಗಳ ಕಟ್ಟನ್ನು ತೆಗೆದು ನನ್ನ ಮುಂದೆ ನೀಡುತ್ತ ಹಲ್ಲುಕಿರಿದನು.

ನನಗೆ ಸಿಟ್ಟುಬಂದು ಸಂಕಟವಾಯಿತು. "ನೀವೇಕೆ ನನಗೆ ರೂಪಾಯಿ ಕೊಡಲಿಕ್ಕೆ ಬರುವಿರಿ?"

"ವೆಂಕಟೇಶನು ಕೊಡಲಿಕ್ಕೆ ಹೇಳಿದ್ದರಿಂದ……"

"ಓಹೊ! ನಿಮಗೂ ನಾನು ನನ್ನ ಗಂಡನೊಡನೆ ಕೇಳಿದ ರೂಪಾಯಿಗೂ ಏನೇನೂ ಸಂಬಂಧವಿಲ್ಲ. ದಯಮಾಡಿ ಇಲ್ಲಿಂದ ಹೊರಟು ಹೋಗಿರಿ!" ಎಂದು ಸಿಡುನುಡಿಯಾಡಿದೆನು.

" ನಿಮಗೇನಾಯಿತು ಗಿರಿಜಾಬಾಯಿ? ನನ್ನಮೇಲೆ ತುಂಬ ಸಿಟ್ಟಾಗಿರುವಿರಲ್ಲ? ವೆಂಕಟೇಶರು ನನ್ನ ವಿಷಯವಾಗಿ ನಿಮಗೆ ಏನೂ ಹೇಳಲಿಲ್ಲವೆ? "

" ಯಾರೂ ಏನೂ ಹೇಳದೆಯೇ ನಿಮ್ಮ ವಿಷಯವೆಲ್ಲ ನನಗೆ ತಿಳಿದು ಹೋಯಿತು. ನನಗೆ ನಿಮ್ಮೊಡನೆ ಹೆಚ್ಚು ಮಾತಾಡಲಿಕ್ಕೆ ಇಷ್ಟವಿಲ್ಲ." ಎಂದು ನಾನು ಅಡುಗೆ ಮನೆಯೊಳಗೆ ಹೊಕ್ಕು ಬಾಗಿಲುಹಾಕಿಕೊಂಡು ಬಿಟ್ಟೆ.

" ಗಿರಿಜಾಬಾಯಿ, ನನ್ನಮೇಲೆ ವೃಥಾ ಸಿಟ್ಟಾಗುವಿರಿ ನೀವು ಇದರಲ್ಲಿ ಬರೇ ಐನೂರೇ ಉಂಟೆಂದು ತಿಳಿದಿರಾ? ವೆಂಕಟೇಶರೇನೋ ಐನೂರೆಂದರು. ನಾನು ಒಂದು ಸಾವಿರವಿಟ್ಟಿದ್ದೇನೆ. ನಾನು ಇಷ್ಟು ಉದಾರ ಭಾವದಿಂದ ಬಂದರೂ ನೀವು ಹೀಗೆ ಸಿಟ್ಟುಮಾಡುವುದು ತರವೆ? ನನ್ನೊಡನೆ ಮುಖ ಕೊಟ್ಟು ಮಾತಾಡಲೂ ಬಾರದೆ? ನಾನೇನು ಅಪರಿಚಿತನೆ? ಬನ್ನಿ ಬನ್ನಿ ಏನೂ ಪರವಾಯಿಲ್ಲ! ಸುಮ್ಮನೆ ಈ ರೂಪಾಯಿ ತೆಗೆದು ಒಳಗಿಟ್ಟುಕೊಳ್ಳಿ. ಗಿರಿಜಾಬಾಯಿ! ಓ ಗಿರಿಜಾಬಾಯಿ!........ "

ನನಗೆ ತಾಳ್ಮೆ ತಪ್ಪಿತು. ಫಥಾರ್‍ನೆ ಬಾಗಿಲು ತೆಗೆದು ಧಡಧಡನೆ ಅವನಿದಿರು ನಡೆದು ನಿಂತು— " ಸಾಕುಮಾಡಿರಿ ನಿಮ್ಮ ಪ್ರಸಂಗವನ್ನು! ಮೊದಲು ಹೊರಟು ಹೋಗಿರಿಲ್ಲಿಂದ! ಹೂಂ ಹೊರಡಿ! " ಎಂದು ಘುಡು ಘುಡುಸಿ ಹೇಳಿ ತುಟಿಕಚ್ಚಿ ನಿಂತೆ! ಮತ್ತೂ ಅವನು ಲಜ್ಜಾಹೀನನಾಗಿ ನನ್ನ ಮುಖವನ್ನು ಪಿಳಿಪಿಳಿ ನೋಡುತಿರಲು, ನಾನು ಸರಕ್ಕನೆ ಹಿಂದಿರುಗಿ, ಮತ್ತೆ ಅಡುಗೆಮನೆಯೊಳಗೆ ಹೊಕ್ಕು ಬಾಗಿಲು ಹಾಕಿಕೊಂಡು ಬಿಟ್ಟೆ.

ಅವನು ಒಂದೆರಡು ನಿಮಿಷ ಗಥ್ಛಚಿಪ್ಪಾಗಿ ಕುಳಿತು,— " ಆಹಾ! ಚಿಂತೆಯಿಲ್ಲ! ನೀವಿಷ್ಟು ಸಿಟ್ಟಿನವರೆಂದು ನಾನರಿತೇ ಇಲ್ಲ. ಭೇಷ್! ಚೆನ್ನಾಗಿಯೇ ಇದೆ ನಿಮ್ಮ ಮರ್ಯಾದೆ! ನಾನಿಷ್ಟು ಮಾಡಿದ್ದಕ್ಕೆ ಇದುವೋ ನಿಮ್ಮ ಪುರಸ್ಕಾರ! ಆದರೂ ನನಗೇನೂ ಸಿಟ್ಟಿಲ್ಲ ಗಿರಿಜಾಬಾಯಿ! ಯಾಕಂದರೆ ನಿಮಗೆ ಬೇಗನೇ ಪಶ್ಚಾತ್ತಾಪವಾದೀತು! " ಎನ್ನುತ್ತ ಎದ್ದು ಹೊರಗೆ ಹೋದನು.

ಆಮೇಲೆ ಅವನು ಮನೆಯೊಳಗಿದ್ದ ಅಡುಗೇ ನಾಯರ್‍ನ್ನು ಕುರಿತು, —" ಎಲೋ ನಾನೇ ಕಾರು ತೆಗೆದುಕೊಂಡು ಹೋಗುತ್ತೇನೆ; ಡ್ರೈವರು ಬಂದರೆ ಮನೆಗೆ ವಾಪಸುಹೋಗಲಿ " ಎಂದು ಹೇಳಿ ಕಾರೇರಿಕೊಂಡು

ಹೊರಟು ಹೋದುದೂ ನನಗೆ ಗೊತ್ತಾಯಿತು.

ಮತ್ತೆ ಸುಮಾರು ಒಂದು ಗಂಟೆಯಮೇಲೆ ಕಾರು ವಾಪಸು ಬಂದಿತು. ಕಾರಿನಿಂದ ಆ ನೀಚನೂ ವೆಂಕಟೇಶರೂ ಕೆಳಗಿಳಿದರು. ಧನದಾಸನು ಅವನ ಮನೆಯೊಳಗೂ, ವೆಂಕಟೇಶರು ನಮ್ಮ ಬಿಡಾರದೊಳಗೂ ಹೊಕ್ಕರು.

ವೆಂಕಟೇಶರು ಒಳಗೆ ಬರುತ್ತ ನನ್ನನ್ನು ನೋಡಿ— "ಏನು ಗಿರಿಜಾ! ಅವಮಾನಮಾಡಿದಿಯಂತಲ್ಲಾ ಧನದಾಸ ಮುದಲೀಯವರಿಗೆ?" ಎಂದು ಕೇಳಿದರು

"ಓಹೊ! ನಿಮ್ಮೊಡನೆ ಚಾಡೀ ಬೇರೆ ಹೇಳಿದ್ದಾನೊ? ಇರಲೀಗ ಆ ಮಾತು. ಮೊದಲು ನಿಮ್ಮ ಊಟವಾಗಲಿ. ಮತ್ತೆ ನಾನೇ ಎಲ್ಲಾ ಹೇಳುವೆನು." ಎಂದು ನಾನು ಎಲೆಹಾಕಿ ಬೇಗಬೇಗನೆ ಬಡಿಸಿದೆ ಅವರು ಧನದಾಸನ ಗುಣಾತಿಶಯಗಳನ್ನು ಹೊಗಳುತ್ತ ಊಟಮಾಡಲಾರಂಭಿಸಿದರು. ಅವರ ಬಾಯಿಯಿಂದ ಅವನ ಉದಾರ ಗುಣಾತಿಶಯಗಳನ್ನು ಕೇಳಿ ಕೇಳಿದಂತೆ, ನನಗೆ ಕೋಪವು ಏರೇರಿ ಬರುತ್ತಿದ್ದಿತು. "........ಮಹಾಪ್ರಭು ಅವನು. ಏನೋ ನಮ್ಮ ಪುಣ್ಯದಿಂದ ಅವನ ದಯೆಗೆ ಪಾತ್ರರಾಗಿದ್ದೇವೆ. ಈದಿನ ಅವನು ಒಂದು ಸಾವಿರ ರೂಪಾಯಿ ಕೊಡಲಿಕ್ಕಿದ್ದಾಗ, ನೀನು ಅವನನ್ನು ಅವಮಾನಪಡಿಸಿಬಿಟ್ಟೆಯಲ್ಲ!...." ಎಂದರು.

"ಎಲ್ಲವೂ ಅವನದೇ ಎನ್ನಿ ಹಾಗಾದರೆ. ನಾಚಿಕೆಯಾಗುವುದಿಲ್ಲವೇ ನಿಮಗೆ?" ಎಂದೆ ನಾನು.

"ನಾಚಿಕೆ? ಹಿಹ್ಹಿಹ್ಹಿ! ನಾಚಿಗೆಯೇನು ಬಂತು? ಹಣದ ವಿಷಯದಲ್ಲಿ ನಾಚಿಗೆ ತೋರಿದರೆ ಈ ಪ್ರಪಂಚದಲ್ಲಿ ಬದುಕಲಿಕ್ಕೇ ಸಾಧ್ಯವಿಲ್ಲ!"

ಅವರು ಊಟವನ್ನು ಮುಗಿಸಿ ಎದ್ದು— "ನೀನೂ ಬೇಗನೇ ಉಂಡು ಬಾ. ನಿನ್ನೊಡನೆ ಸ್ವಲ್ಪ ಮುಖ್ಯ ವಿಷಯ ಮಾತಾಡಲಿಕ್ಕಿದೆ." ಎಂದರು.

"ನನಗೂ ನಿಮ್ಮೊಡನೆ ಮುಖ್ಯವಾದೊಂದು ಮಾತಿದೆ" ಎಂದು ನಾನೂ ಅಂದೆ. ಅವರು ಹೊರಗೋಣೆಗೆ ಹೋಗಿ ಕುಳಿತು ಸಿಗರೇಟು ಹಚ್ಚಿಕೊಂಡರು.

ನನಗೆ ಊಟವೇ ಬೇಕಾಗಿರಲಿಲ್ಲ. ಆದುದರಿಂದ ಎಲ್ಲವನ್ನು ಬೇಗ ಬೇಗನೇ ಬದಿಗೊತ್ತರಿಸಿಟ್ಟು, ಅವರಬಳಿಗೆ ಹೋಗಿನಿಂತು ಖಂಡಿತಸ್ವರದಿಂದ

ಹೇಳಿದೆ:—"ನೋಡಿ, ಎಲ್ಲಾ ವಿಷಯುವೂ ಮತ್ತೆ. ಮೊತ್ತಮೊದಲು ನಾಳಿಗೇ ಈ ಬಿಡಾರವನ್ನು ಬಿಟ್ಟು ಬಿಡಬೇಕು. ಈ ಬಿಡಾರದಲ್ಲಿರಲು ನನ್ನಿಂದಾಗದು!"

"ಅದೇನು ?"

"ನನಗೆ ಈ ಧನದಾಸನ ರೀತಿಕೊಂಚವೂ ಹಿಡಿಯುವುದಿಲ್ಲ."

."ಆದರೆ ನನಗೆ ಹಿಡಿಯುತ್ತದಲ್ಲ? ಹೋಗುವದು ಹೇಗೆ"?

"ಇಲ್ಲೇ ಇದ್ದರೆ ನೀವು ನನ್ನ ಹೆಣವನ್ನೇ ನೋಡಬೇಕಾದೀತು ?"

"ಏನು-ಏನಂದಿ ?"

"ಇಲ್ಲಿಯ ಲಕ್ಷಣವನ್ನೆಲ್ಲಾ ನೋಡಿದರೆ ನಮ್ಮ ಎಲ್ಲಾ ಖರ್ಚುಗಳನ್ನು ನಡೆಸುವವನು ಅವನೇ ಎಂಬಂತೆ ಕಾಣುತ್ತದೆ ?"

"ಕಂಡರೇನಾಯಿತು ? ನಿನಗೆ ಸುಖವಾಗಿ ದಿನಕಳೆದರೆ ಸಾಲದೆ ?"

"ಸಾಲದು. ನೀವು ನನ್ನೊಡನೆ ಪೂರಾಸುಳ್ಳುಹೇಳಿದಿರಿ!"

"ಹೇಗೆ ಸುಳ್ಳು ? ನಾವೀಗ ಒಳ್ಳೆಯಸ್ಥಿತಿಯಲ್ಲಿಲ್ಲವೆ ? ನಿನಗೆ ಬೇಕಾದುದೆಲ್ಲಾ ಸಿಕ್ಕಿರುವುದಿಲ್ಲವೆ ?"

"ಛಿ! ನೀಚಮಾರ್ಗದಲ್ಲಿ ಬಂದದ್ದದು. ಆ ಹೊಸಸೀರೆಗಳನ್ನೆಲ್ಲ ಆಗೋ ಅತ್ತಮೂಲೆಗೆ ಹಾಕಿಬಿಟ್ಟದ್ದೇನೆ. ನಾಳೆ ಉಪವಾಸ ವಿದ್ದರೂಸರಿ, ಅವನ ಪಾತ್ರೆಪಡದೆಗಳಲ್ಲಿ ನಾನೇನೂ ಮಾಡಲಿಕ್ಕಿಲ್ಲ. ನಿಮಗೆ ನಾನು ಬದುಕ ಬೇಕೆಂದಿದ್ದರೆ ನಾಳೆ ಬೆಳಗ್ಗೆಯೇ ಈ ಮನೆಬಿಟ್ಟು ಹೋಗಬೇಕು. ಭಿಕ್ಷೆಬೇಡಿ ತಿಂದರೂ ಚಿಂತೆಯಿಲ್ಲ."

"ಏನು ಹುಚ್ಚು ಹಿಡಿಯಿತು ನಿನಗೆ ಗಿರಿಜಾ ? ಹಾಗೇನಾಯಿತು ? ಏನು ನಿನ್ನ ಮರ್ಯಾದಿ ಬೀದಿಯುಲ್ಲಿ ಹೋಯಿತೆ ?"

"ಬೀದಿಯುಲ್ಲಿಯೇ ಹೋಗಬೇಕೆ ಮರ್ಯಾದೆ? ಅಯ್ಯೋ! ನಿಮಗೆ ಆ ನೀಚನ ಹೃದ್ಗತ ಗೊತ್ತಾಗಿದೆಯೋ ಇಲ್ಲವೋ ತಿಳಿಯೆನಲ್ಲ!"

ಅವರು ಸ್ವರವನ್ನು ತಗ್ಗಿಸಿ ಹೇಳಿದರು:—"ಗಿರಿಜ, ಏನೋಭಾರೀ ಪ್ರಮಾದವಾಗಿ ಮಾತಾಡುತ್ತೀ! ಹಣವೂ ಸುಖವೂ ಸುರಿದುಕೊಂಡು ಬರುವಾಗ ಹೀಗೆಲ್ಲಾ ಸೂಕ್ಷ್ಮ ನೋಡಲೇಬಾರದು. ಏನೋ ನಮ್ಮಹಾಗೆ ಅವನೂ ಒಬ್ಬ. ಪ್ರಚಂಡ ಧನಿಕ. ಬೇಕಾದಹಾಗೆ ಅವನು ನಿನಗೂ ನನಗೂ ಕೊಡಲಿಕ್ಕೆ ಸಿದ್ಧನಾಗಿರುವಾಗ ಏನೋಸ್ವಲ್ಪ ನಗೆಚಾಟಿಗೆ ಮಾಡಿದ

ಮಾತ್ರಕ್ಕೆ ಪಾತಿವ್ರತ್ಯವು ಕೆಟ್ಟು ಹೋಯಿತೊ. ಹೀಗೆಲ್ಲಾ ಈ ಲೋಕ ದಲ್ಲಿ ಎಷ್ಟು ನಡೆಯುತ್ತದೆ ಗೊತ್ತೊ? ಚಿಕ್ಕಚಿಕ್ಕ ಉದ್ಯೋಗಸ್ಥರಿದ್ದಾರಲ್ಲಾ ಆಫೀಸುಗಳಲ್ಲಿ ?– ಅವರ ಹೆಂಡತಿಯರು ಸ್ವಲ್ಪ ಚೊಕ್ಕವಾಗಿರುವರೂಂತ ಇಟ್ಟುಕೋ, ಗುಟ್ಟಿನಲ್ಲಿ ಸ್ವಲ್ಪ ಆ ಮೇಲಾಫೀಸರ್ ದೊರೆಗಳ ದಯೆಗೆ ಅವ ರನ್ನು ಪಾತ್ರಮಾಡಿ, ಗಂಡಂದಿರು ದೊಡ್ಡ ದೊಡ್ಡ ಉದ್ಯೋಗದ ಮೇಲೆ ಏರಿಬಿಡುತ್ತಾರೆ. ಅದೆಲ್ಲಾ ಒಂದು ಲೆಕ್ಕವೆ? ವೈಗೇನಾದರೂ ದೋಷ ಅಂಟಿಕೊಳ್ಳುತ್ತದೆಯೇ ?........"

"ಅಯ್ಯೋ! ಇಂಥಮಾತು ನೀವು ಆಡ ಬಹುದೇ ನನ್ನಮುಂದೆ ?...."

"ಕೇಳು. ಇಂಥ ಮಾತು ನಿನ್ನಮುಂದೆ ಆಡ ಬೇಕಾಗಿಬಂದದ್ದ ರಿಂದಲೇ ಆಡುತ್ತೇನೆ. ಅಲ್ಪಸ್ವಲ್ಪ ಲಾಭಕ್ಕೆಲ್ಲ ಹೀಗೆಲ್ಲಾ ಮಾಡಿದರೆ ಪಾಪ ವೆನಿಸೀತು, ದೋಷವೆನಿಸೀತು. ದೊಡ್ಡದೊಡ್ಡ ಲಾಭಕ್ಕೆ ಅಲ್ಪಸ್ವಲ್ಪ ಮಾನ ಹಾನಿಯಾದ ಮಾತ್ರಕ್ಕೆ, ಅದೂ ಯಾರಿಗೂ ತಿಳಿಯದೆ ಆಗುವಾಗ, ಅದನ್ನೊಂದು ದೊಡ್ಡ ಪ್ರಮಾದವಾಗೆಣಿಸುವದು ತೀರ ಮೂಢತನ ಗಿರಿಜ! ಸುಖವಾಗಿ ಬಾಳ ಬೇಕಾದರೆ ಅಲ್ಪಸ್ವಲ್ಪ ಮರೆ–ಮೋಸ ಬೇಕೇಬೇಕು. ಈಗ ಇಲ್ಲಿಯೇ ಇದ್ದರೆ ಒಳಗೆ ನಡೆಯುವುದೇನೆಂದು ಯಾರಿಗೂ ಗೊತ್ತಾಗುವ ಹಾಗಿಲ್ಲ. ನಿನ್ನ ತಂದೆ–ತಾಯಿ ಎಲ್ಲರೂ ನಿನ್ನ ಸುಖವನ್ನು ನೋಡಿ ಸಂತೋಷಪಟ್ಟಾರು. ನೋಡು, ಲೋಕದಲ್ಲಿ ಎಷ್ಟೋ ಹೆಂಗಸರು ಗಂಡ ನಿಗೆತಿಳಿಯದಂತೆಯೇ ಎಂತೆಂಥ ಕೆಲಸ ಮಾಡುವುದಿಲ್ಲವೇ? ನನಗೆ ಅಂತಹ ಸಂಕಟವೇ ಇಲ್ಲ. ಗಂಡನಾದ ನಾನೇ ಒಪ್ಪಿರುವಾಗ ನೀನೇಕೆ ಹೆದರ ಬೇಕು ? ಈ ಮನೆ ಬಿಟ್ಟು ಹೋದರೆ ಮತ್ತೆ ಇಂಥಹ ಸುಖಯೋಗವು ದೊರೆಯಬಹುದೆ ?......"

"ಅವರು ಇನ್ನೂ ಉದ್ದಕ್ಕೆ ಹೇಳುತ್ತಿದ್ದರೋ ಏನೋ; ನಾನು ಕೇಳ ಲಾರದೆ ಕಿವಿಯನ್ನು ಮುಚ್ಚಿಕೊಂಡು,– "ಸಾಕು ಸಾಕು ಸಾಕು ನಿಮ್ಮ ಬೋಧನೆ! ಹೀಗೆಲ್ಲಾಹೇಳಲು ಅವನೇ ನಿಮಗೆ ಹೇಳಿ ಕೊಟ್ಟದ್ದೆಂತ ಕಾಣು ತ್ತದೆ ಅದೇ ಆವನಂದ ಗಂಡನು ನಿನಗೆ ಏನೂ ಹೇಳಲಿಲ್ಲವೇ ಅಂತ ? ಅಯ್ಯೋ! ನಿಮ್ಮನ್ನು ನಾನು ಏನೋ ಅಂತ ತಿಳಿದೆ! ಈಗ ಗೊತ್ತಾಯಿತು ನಿಮ್ಮ ಪೂರ್ಣವೇಷ! ಅಯ್ಯೋ! ವೇಶ್ಯೆಯ ಕೂಟದಲ್ಲಿಯೇ ಬೆರೆತು ಬೆರೆತು ಹೆಂಡತಿಗೂ ವೇಶ್ಯೆಗೂ ಭೇದವೇ ಇಲ್ಲಾಂತ ಮಾಡಿದ್ದೀರಿ. ಛೀ ಛೀ ಛೀ! '

ನನ್ನನ್ನು ದುರುಗುಟ್ಟಿ ನೋಡಿದರು ಒಂದು ನಿಮಿಷ. "ಗಿರಿಜ! ಸುಮ್ಮನೆ ಕೂಗಾಡಬೇಡ! ಭೇದವೆಲ್ಲ ನನಗೆ ಚನ್ನಾಗಿಗೊತ್ತಿದೆ. ಅದನ್ನು ಯಾಕೆ ಹೇಳುವುದಂತ ಈವರೆಗೆ ಹೇಳಲಿಲ್ಲ. ನಿನ್ನ ಪಾತಿವ್ರತ್ಯವೆಲ್ಲ ನನಗೆ ಗೊತ್ತಿಲ್ಲವೆಂದು ತಿಳಿದಿಯಾ? ಆ ಶಾಲೆಯ ಅಧಿಕಾರಿ ಸದಾಶಿವಂನೊಡನೆ ನೀನು ಮಾಡಿಕೊಂಡ ಕಳ್ಳ ಸಂಬಂಧವನ್ನು ನಾನು ಚನ್ನಾಗಿ ಬಲ್ಲೆ. ನಿನ್ನ ಮನೆಯ ಬಳಿಯಲ್ಲಿಯೇ ನಿನ್ನ ಸುದ್ದಿ ತಿಳಿಸುವ ಜನರು ನನಗಿದ್ದಾರೆ. ಇದು ಅದಕ್ಕಿಂತ ಕೆಟ್ಟ ಕೆಲಸವೇನೂ ಅಲ್ಲ; ತಿಳಿದುಕೋ!" ಎಂದರು ತೀಕ್ಷ್ಣ ಸ್ವರದಿಂದ.

ಅಣುಗುಂಡಿನಂತೆ ಪರಿಣಮಿಸಿತು ಈ ಮಾತು ನನ್ನ ಹೃದಯಕ್ಕೆ! ಏನು ಹೇಳಬೇಕೆಂಬುದು ತೋರಲಿಲ್ಲ! ಸ್ತಂಭಿತೆಯೇ ಆದೆನು! ಹಾಗಾದರೆ ಇದು ಪತಿಯ ಸೇಡೆ? ಅಯ್ಯೋ! ಮತ್ತೂ ಅವರಂದರು:— "ಇನ್ನು ಸುಮ್ಮನೆ ಚಂಡಿತನಮಾಡಿ ಮಾನಮರ್ಯಾದೆಯಂತ ಮಾತಾಡಬೇಡ ನನ್ನ ಮುಂದೆ. ನಿನ್ನ ದುಷ್ಟ ಸಂಬಂಧವನ್ನು ತಿಳಿದೂ ನಿನ್ನನ್ನು ಕರೆದುಕೊಂಡು ಬಂದು ಸುಖವಾಗಿ ಇರಗೊಡಿಸಿದ್ದಕ್ಕೆ ನೀನು ನನ್ನನ್ನು ಹೊಗಳಬೇಕು. ಇನ್ನೊಬ್ಬ ಗಂಡನಾಗುತ್ತಿದ್ದರೆ ಇಂಥ ಹೆಂಡತಿಯ ಕೊಲೆ ಮಾಡಿಬಿಡುತ್ತಿದ್ದ! ಯೋಚನೆ ಮಾಡು. ನಾನಂತೂ ಖಂಡಿತವಾಗಿ ಇವನಾಶ್ರಯವನ್ನು ಬಿಟ್ಟು ಹೊರಡುವವನಲ್ಲ. ನೀನೆಲ್ಲಿಗೆ ಹೋಗುತ್ತಿ ಇನ್ನು?........"

ಈ ಮಾತುಗಳು ಪಕ್ಕದ ಕೋಣೆಯಲ್ಲಿರುವವನಿಗೆ ಕೇಳಿಸುವಂತಹುದೇ. ಅಂತೆಯೇ ಇದೇ ಸಮಯದಲ್ಲಿ ಆ ಧನದಾಸನು ಒಳಗೆ ಪ್ರವೇಶಮಾಡಿದನು. ಪ್ರವೇಶಿಸುತ್ತ ಅವನು—"ಏನು ವೆಂಕಟೇಶ್? ಬಹಳ ಚಚ್ಚರವಾಗುತ್ತಿದೆಯಲ್ಲಾ? ಅವರ ಮನಸ್ಸಿಗೆ ನೋವಾಗುವ ಹಾಗೆ ಹಾಗೆಲ್ಲಾ ಮಾತಾಡಿಬಿಡಬೇಡಿರಿ ವೆಂಕಟೇಶ್. ನನಗೇನೂ ಕೋಪವಿಲ್ಲ. ಓ ಗಿರಿಜಾಬಾಯಿ, ನಿಮ್ಮ ಮನಸ್ಸಿಗೆ ಬಾರದಿದ್ದರೆ ನಾನು ನಿಮ್ಮ ಮಾತಿಗೇ ಬರುವುದಿಲ್ಲ ಬಿಡಿ. ಯಾಕೆ ನೀವಿಬ್ಬರೂ ಜಗಳ ಮಾಡಿಕೊಳ್ತೀರಿ? ಮನಸ್ಸಿಗೇನೂ ಹಚ್ಚಿಕೊಳ್ಳಬೇಡಿ" ಎಂದಂದು ವೆಂಕಟೇಶರ ಕೈಯನ್ನು ಹಿಡಿದು,— "ಕೆಲವು ಹೆಂಗುಸರು ಹೀಗೆಯೇ ವೆಂಕಟೇಶ್. ಅದೊಂದು ಆಶ್ಚರ್ಯವಲ್ಲ. ಇತ್ತ ಬನ್ನಿ ಹೇಳ್ತೇನೆ-" ಎಂದು ಅವರನ್ನು ಹೊರಕ್ಕೆ ಕರೆದೊಯ್ದನು. ಅಲ್ಲಿ ಇಬ್ಬರೂ ಏನೋ ಪಿಸಪಿಸನೆ ಮಾತಾಡಿಕೊಂಡರು. ಆ ಮೇಲೆ ವೆಂಕಟೇಶರು ಮಾತ್ರ ಒಳಗೆ ಬಂದು

ಬಾಗಿಲು ಹಾಕಿ ಮಂಚದಲ್ಲಿ ಬಿದ್ದರು. ನಾನು ಕುಳಿತಲ್ಲೇ ಒರಗಿಬಿಟ್ಟೆನು. ಅವರು ಮಲಗಿದಲ್ಲೇ ಹೇಳುತ್ತಿದ್ದರು— "ನೋಡಿದಿಯಾ ಅವನ ಮನಸ್ಸು ಎಷ್ಟು ಶಾಂತ! ಎಷ್ಟು ತಾಳ್ಮೆ! ಇಂಥ ಪರಮೋದಾರಿ ಎಲ್ಲಿ ಯಾರಿದ್ದಾರೆ ಈ ಕಾಲದಲ್ಲಿ?........"

ಒರಗಿದಲ್ಲಿಂದ ನಾನು ಕದಲಲೇ ಇಲ್ಲ. ಅದು ನಿದ್ರೆಯೋ ತಂದ್ರಾವಸ್ಥೆಯೋ, ಕನಸೋ, ನೆನಸೊ, ಬೆಳಗುತನಕವೂ ಹಾಗೆಯೇ ಇದ್ದೆ. ಬೆಳಗಾದ ಮೇಲೆ ವೆಂಕಟೇಶರು ಎದ್ದು, ನನ್ನ ಮೈಕೈ ಮುಟ್ಟಿ ನೋಡಿ,— "ಗಿರಿಜ, ಮೈ ಏನೋ ಕೊಂಚ ಬಿಸೀ ಇರುವ ಹಾಗಿದೆ; ಇವತ್ತೇನೂ ಕೆಲಸ ಮಾಡಬೇಡ. ಎಲ್ಲಾ ಹೊಟಲಿನಿಂದ ತರಿಸುತ್ತೇನೆ" ಎಂದರು. ನಾನೇನೂ ಮಾತೇ ಆಡಲಿಲ್ಲ. ಅವರು ಹೋಗಿ ಹೊಟಲಿನಿಂದ ಕಾಫೀ ತಂದು ನಾನು ಕುಡಿಯುವಂತೆ ಒತ್ತಾಯ ಮಾಡಿದರು. "ಬೇಕಾದರೆ ಕುಡಿದೇನು, ಅಲ್ಲಿಡೀ" ಎಂದುಬಿಟ್ಟೆ. ಧನದಾಸನೂ ಬಂದು ಇಣಿಕಿ ನೋಡಿ— "ಪಾಪ, ತುಂಬ ಮನಸ್ಸಿಗೆ ಹಚ್ಚಿಕೊಂಡುಬಿಟ್ಟಿರು ಗಿರಿಜಾಬಾಯಿ. ಒಂದೆರಡುದಿನ ಹೀಗಿದ್ದೀತು; ಮತ್ತೆಲ್ಲ ಸರಿಹೋಗುತ್ತದೆ" ಎಂದು ಹಲ್ಲು ತೋರಿಸಿದನು

ಅನಂತರ ಅವರಿಬ್ಬರೂ ಒಂದಾಗಿ ಕಾರೇರಿಕೊಂಡು ಹೊರಟುಹೋದರು. ಎಂದಿನಂತಿಲ್ಲದೆ ಆ ದಿನ ಹಗಲು ಹೊತ್ತಿನಲ್ಲಿಯೇ ಗೇಟಿಗೆ ಬೀಗ ಹಾಕಿತ್ತು. ಮತ್ತೆ ಮಧ್ಯಾಹ್ನ ಕಾರು ಮನೆಗೆ ಬರುವಾಗ ಬೀಗ ತೆಗೆಯಲ್ಪಟ್ಟಿತು. ಕಾರಿನಲ್ಲಿ ವೆಂಕಟೇಶರು ಹೋಟೆಲಿನಿಂದ ಊಟವನ್ನು ತಂದಿದ್ದರು. ಸ್ವಲ್ಪ ಹೊತ್ತಿನ ಮೇಲೆ ಧನದಾಸನೊಬ್ಬನೇ ಕಾರಿನಲ್ಲಿ ಹೊರಟುಹೋದನು. ವೆಂಕಟೇಶರು ಅಂದು ನನ್ನ ಬಳಿಯಲ್ಲಿಯೇ ಕುಳಿತು ಊಟಮಾಡುವಂತೆ ಒತ್ತಾಯಿಸುತ್ತಾ, ದುಷ್ಟನೀತಿಯನ್ನು ಬೋಧಿಸುತ್ತ, ಸಾಯಂಕಾಲದವರೆಗೂ ಇದ್ದರು. ಅವರೊಡನೆ ಮಾತಾಡಿ ಏನೂ ಪ್ರಯೋಜನವಿಲ್ಲವೆಂದುಕೊಂಡು ನಾನು ಸುಮ್ಮನೆಯೇ ಇದ್ದೆನು. ಹೊಟ್ಟೆ ಸರಿಯಿಲ್ಲವೆಂಬ ನೆವನಹೇಳಿ ಊಟವನ್ನೆ ಮಾಡಲಿಲ್ಲ. ಸಂಜೆಯಾಗುವಾಗ ಅವರು ಎಲ್ಲಿಗೋ ಹೊರಟುಹೋದರು. ಆಗ ತಾನೇ ನಾನು ಸ್ವಲ್ಪ ಉಸಿರಾಡಿಸಲಾರಂಭಿಸಿದ್ದು.

ನನ್ನ ಮೇಲೆ ಕಿಂಚಿತ್ತಾದರೂ ಸಹಾನುಭೂತಿಯುಳ್ಳ ತುಂಗೂ ಕೆಲಸದವಳು ಅಲ್ಲಿಯೇ ಇದ್ದಳು. ಅವಳನ್ನು ಸನ್ನೆಮಾಡಿ ಕರೆದೆ. ಅವಳೊ

ಡನೆ ನನ್ನ ಸಂಕಟವನ್ನೆಲ್ಲ ಹೇಳಿಕೊಂಡೆ. ಮೊದಲು ಈ ಮನೆಯಿಂದ ಹೋಗಲಿಕ್ಕೆ ಏನು ಉಪಾಯವೆಂದು ಅವಳನ್ನೆ ಕೇಳಿದೆ ಅದಕ್ಕೆ ಅವಳೆಂದಳು- "ಅಮ್ಮ, ನೀವೆಲ್ಲಿಗಾದರೂ ಹೊರಗೆ ಹೋಗದಂತೆ ನೋಡಿಕೊಳ್ಳಬೇಕೆಂದು ನನಗೂ, ನಾಯರ್ರಿಗೂ, ನನ್ನ ಗಂಡನಿಗೂ ಹೇಳಿದ್ದಾರೆ. ಆದ್ದರಿಂದ ನಿಮ್ಮನ್ನು ಹೋಗಬಿಟ್ಟರೆ ನಮಗೇ ದಂಡ ಬಂದೀತು. ಅಂತೂ ಹೇಗಾದರೂ ಓಡಿ ಹೋಗಬಹುದೆನ್ನಿ. ನೀವೆಲ್ಲಿಗೆ ಹೋಗುವಿರಮ್ಮ?"

ಎಲ್ಲಿಗೆಂದು ಇನ್ನೂ ಗೊತ್ತಿಲ್ಲ ತುಂಗೂ; ಈ ಸ್ಥಿತಿಯಲ್ಲಿ ನಾನು ಹೆತ್ತವರ ಬಳಿಗೆ ಹೇಗೆ ಹೋಗಲಿ? ನನ್ನ ಹಿತಚಿಂತಕರನ್ನೆಲ್ಲ ನಾನೇ ಕಳೆದು ಕೊಂಡೆ ತುಂಗೂ. ನಿನಗೆ ತಿಳಿದವರಾರೂ ಇಲ್ಲವೆ? ನನಗೊಂದು ಎರಡು ದಿನ ಆಶ್ರಯಸಿಕ್ಕಿದರೆ ಸಾಕು ಅಷ್ಟರಲ್ಲಿ ನಾನು ಎಲ್ಲಿಗೆ ಹೋಗುವುದೆಂದು ನಿಶ್ಚಯಮಾಡಿ ಆ ಮೇಲೆ ಹೊರಟುಹೋಗುವೆನು."

"ಹಾಗಾದರೆ ಅಮ್ಮ, ತೈನಾಂ ಪೇಟೆಯಲ್ಲಿ ನನ್ನ ಚಿಕ್ಕಮ್ಮನೊಬ್ಬ ಳಿದ್ದಾಳೆ. ಬಹಳ ಒಳ್ಳೆಯವಳು. ನಾಳೆ ಹತ್ತು ಗಂಟೆಗೆ ನಾನು ಅಲ್ಲಿಗೆ ಹೋಗಿ, ಅವಳೊಡನೆ ಮಾತಾಡಿಬರುತ್ತೇನೆ. ಆ ಮೇಲೆ ಸಮಯನೋಡಿ ನೀವಿಲ್ಲಿಂದ ಜಾರಬಹುದು."

"ಅಯ್ಯೋ, ನಾಳೆಯವರೆಗೆ ಇಲ್ಲಿ ಹೇಗಿದ್ದೇನು?"

"ಹೆದರಬೇಡೀಮ್ಮ. ದೇವರ ಮೇಲೆ ಭಾರಹಾಕಿ ಧೈರ್ಯವಾಗಿರಿ."

ಈ ದಿನ ರಾತ್ರಿ ನೀನಾಗಲೀ ನಿನ್ನ ಗಂಡನಾಗಲೀ ಇಲ್ಲಿಗೆ ಬಂದು ಹೊರಗೆ ಜಗುಲಿಯಲ್ಲಿ ಮಲಗಿರಲು ಸಾಧ್ಯವೇ?"

"ಹೇಗಮ್ಮ ಅದು? ಈ ಧನದಾಸಯ್ಯ ಒಪ್ಪಬೇಕಲ್ಲ?"

"ಹೌದು. ನೀವು ನನ್ನೊಡನೆ ಸಂಚುಮಾಡಿಕೊಂಡಿರೆಂಬ ಸಂದೇಹ ವಾದೀತು ಅವನಿಗೆ. ಬೇಡಮ್ಮ. ನಾಳೆ ಖಂಡಿತ ವಿಚಾರಿಸಿಕೊಂಡುಬಂದು ಹೇಳುವಿಯಾ ಹಾಗಾದರೆ?"

"ಹೇಳುತ್ತೇನಮ್ಮ."

"ನಿನ್ನ ಉಪಕಾರ ಎಂದಿಗೂ ಮರೆಯುವುದಿಲ್ಲ ತುಂಗೂ. ನನ್ನೊಡನೆ ಏನೂ ಕಾಸಿಲ್ಲ. ನಿನಗೇನು ಕೈಮಾರುಕೊಡಲಮ್ಮ?"

"ಏನೂ ಬೇಡಮ್ಮ. ನಾನು ಹಾಗೇನು ಮಾಡಿದ್ದೇನೆ ನಿಮಗೆ? ಅಮ್ಮ, ನಿಮ್ಮನ್ನು ನೋಡಿದರೆ ನೀವು ಇವತ್ತು ತೀರ ಉಪವಾಸವಿದ್ದಹಾಗೆ

ಕಾಣುವಿರಿ ಯಾಕಮ್ಮ ? ”

“ ಈ ಮನೆಯಲ್ಲಿ ನಾನೇನೂ ಉಣ್ಣಲಾರೆ. ”

“ ಅಯ್ಯೋ ! ಹಾಗಾದರೆ ಹೇಗೆ ತಾಯಿ ? ಇಲ್ಲಿಂದ ತಪ್ಪಿಸಿಕೊಂಡು ಹೋಗಲಿಕ್ಕಾದರೂ ಶಕ್ತಿ ಬೇಕಲ್ಲ ? ”

“ ಏನೂ ಹೊಟ್ಟೆಗೆ ಸೇರುವದಿಲ್ಲ ತುಂಗೂ. ಹಾಗೆ ಬೇಕಾದರೆ ನೀರಿದೆ ಕುಡಿದೇನು. ”

“ ಬೇಡಬೇಡಮ್ಮ. ನಿಮಗೆ ಏನು ಬೇಕಾದರೂ ಒದಗಿಸಿಕೊಡುವಂತೆ ನನಗೆ ಹೇಳಿದ್ದಾರಮ್ಮ. ನಾನು ಈಗಲೇ ಹತ್ತಿರವಿರುವ ಹೋಟೆಲಿಗೆ ಹೋಗಿ ಕಾಫೀ ತರುತ್ತೇನೆ. ”

“ ಬೇಡ ಬೇಡೆ”ಂದರೂ ಕೇಳದೆ, ತುಂಗೂ ಹೋಗಿ, ಕಾಫಿಯನ್ನೂ ಎರಡು ಮೋಸಂಬಿ ಹಣ್ಣುಗಳನ್ನೂ, ನಾಲ್ಕು ಮಲೆಬಾಳೇ ಹಣ್ಣುಗಳನ್ನೂ ತಂದಳು ಅವಳಿಗೆ ಬೇಸರವಾಗಬಾರದೆಂದು ನಾನು ಅವುಗಳನ್ನು ತೆಗೆದು ಕೊಂಡೆನು. ಅವಳು ನನಗೆ ತುಂಬಾ ಧೈರ್ಯವನ್ನು ಹೇಳಿ ಹೋದಳು.

೬

ಸಾಯಂಕಾಲ ಏಳುಗಂಟೆಗೆ ಧನದಾಸನು ಕಾರಿನಲ್ಲಿ ಬಂದಿಳಿದನು. ಅವನೊಬ್ಬನೇ ಬಂದುದನ್ನು ನೋಡಿ ನಾನು, ಬೀಡಾರದ ಬಾಗಿಲಿಕ್ಕಿ ತಾಳ ಜಡಿದು ಒಳಗೆ ಕುಳಿತುಬಿಟ್ಟೆನು. ಸ್ವಲ್ಪ ಹೊತ್ತಿನಲ್ಲಿ ಧನದಾಸನು ಆ ಬಾಗಿ ಲನ್ನು ತಟ್ಟಿ ಪ್ರೀತಿಯ ಮಾತುಗಳಿಂದ ನನ್ನನ್ನು ಕರೆಯಲಾರಂಭಿಸಿದನು. ನಾನು ಸ್ವಲ್ಪ ಹೊತ್ತು ಸುಮ್ಮನಿದ್ದು, ಮತ್ತೂ ಅವನ ತೊಂದರೆಯನ್ನು ಸಹಿಸದೆ,— “ ಯಾಕೆ ಸುಮ್ಮನೆ ಗಲಾಟೆ ಮಾಡುವಿರಿ ? ನಾನು ನಿಮಗಾಗಿ ಬಾಗಿಲು ತೆರೆಯಲಾರೆ ” ಎಂದು ಸ್ಪಷ್ಟವಾಗಿ ಹೇಳಿದೆ. ಅದಕ್ಕೆ ಅವನು— “ ವೆಂಕಟೇಶರು ಆಫೀಸಿನಲ್ಲಿದ್ದಾರೆ. ನಿಮ್ಮನ್ನು ಕಾರಿನಲ್ಲಿ ಅಲ್ಲಿಗೆ ಕರೆದು ಕೊಂಡು ಬರುವಂತೆ ನನಗೆ ಹೇಳಿದ್ದಾರೆ ಅಲ್ಲಿಂದ ಸಿನೆಮಕ್ಕೆ ಹೋಗ ಬೇಕಂತ ಇದ್ದೇವೆ. ನನ್ನ ಮೇಲೆ ಇಲ್ಲದ ಸಂದೇಹವನ್ನು ತಾಳಬೇಡಿ. ಬಾಗಿಲು ತೆರೆಯಿರಿ........ ” ನಾನು ಮತ್ತೇನೂ ಮಾತಾಡದೆ, ಕಿವಿಗಳನ್ನು ಮುಚ್ಚಿಕೊಂಡು ಸುಮ್ಮನೆ ಕುಳಿತಿದ್ದೆ. ಅನಂತರ ಅವನು ಅಲ್ಲಿಂದ ತೊಲಗಿ ದಂತಾಯಿತು.

ಸ್ವಲ್ಪ ಹೊತ್ತಿನಲ್ಲಿ ಅಡುಗೇ ಕೋಣೆಯಲ್ಲಿ, ಆ ಮನೆಯ ಗೋಡೆಯಲ್ಲಿ

ಇಕ್ಕಿಕೊಂಡೇ ಇದ್ದ ಬಾಗಿಲೊಂದು ಸದ್ದಾಗತೊಡಗಿತು. ಅದರಿಂದ ನನಗೆ ಗಾಬರಿಯೂ ಆಯಿತು. ಆ ಬಾಗಿಲಿಗೆ ಈಚೆಯ ಬದಿಯಲ್ಲಿ ಚಿಲಕತಾಳ ಯಾವುದೂ ಇರಲಿಲ್ಲ ಅದು ಬಹಳ ದಿನದಿಂದ ಇಕ್ಕಿಕೊಂಡಿದ್ದ ಬಾಗಿಲಾ ದುದರಿಂದ ಫಕ್ಕನೆ ತೆರೆಯಲು ಆಗಿಲ್ಲವೆಂದು ತೋರುತ್ತದೆ. ಆ ನೀಚನ ಇಂದಿನ ಈ ಸಾಧನೆಯನ್ನು ನೋಡಿ, ಇಂದೇನೋ ಅವನು ದೃಢನಿಶ್ಚಯ ಮಾಡಿರುವನೆಂದು ನನಗೆ ಗೊತ್ತಾಯಿತು. ನಾನು ಮಿಂಚಿನ ವೇಗದಿಂದೆದ್ದು ಹೊರಬಾಗಿಲಿಗೆ ಕಿವಿಹಚ್ಚಿ ಒಂದು ನಿಮಿಷ ಆಲಿಸಿದೆ. ಅಲ್ಲಿ ಹೊರಗಡೆ ಯಾರೂ ಇರುವಂತೆ ತೋರಲಿಲ್ಲ. ಸದ್ದಾಗದಂತೆ ಒತ್ತಿಕೊಂಡು ತಾಳವನು ದೂಡಿ, ಬಾಗಿಲು ಕೊಂಚ ತೆರೆದು ಹೊರಗೆ ಹಣಿಕಿಹಾಕಿದೆ ಯಾರೂ ಕಾಣಲಿಲ್ಲ. ಅತ್ತ ಕತ್ತಲೆಯಲ್ಲಿ ಯಾರಾದರೂ ನೋಡುತ್ತಿದ್ದಾರೇನೋ! ಕೋಣೆಯೊಳಗೆ ದೀಪ ಬೇರೆ ಉರಿಯುತ್ತಿತ್ತು. ಕೊಂಚ ತೆರೆದ ಆ ಬಾಗಿಲ ಎಡೆಯಲ್ಲಿ ನಾನು ಹೊರಕ್ಕೆ ನುಸುಳುವುದನ್ನು, ಕೋಣೆಯೊಳಗಿನ ಬೆಳಕು ಬಾಗಿಲೆಡೆಯಿಂದ ಹೊರಗೆಬಿದ್ದು, ನನ್ನನ್ನು ತೋರಿಸುತ್ತಿತ್ತು ಆದರೆ ಯೋಚಿಸುತ್ತ ತಳುವುವಂತಿಲ್ಲ. ಒಳಗಿನ ಬಾಗಿಲು ಜೋರಾಗಿ ಅಲುಗುವ ಸದ್ದು ಕೇಳಿಸುತ್ತಿತ್ತು. ನಾನು ಸರಕ್ಕನೆ ಹೊರಕ್ಕೆ ನುಸುಳಿ, ಆ ಬೆಳಕಿನ ಗೆರೆಯಿಂದ ಕತ್ತಲೆಗೆ ಸರಿದೇ ಬಿಟ್ಟೆ. ಪುಣ್ಯಕ್ಕೆ ಯಾರೂ ನೋಡಲಿಲ್ಲ. ಇನ್ನು ಬೀಗವಿಕ್ಕಿರುವ ಗೇಟಿನಿಂದ ಹೊರಗೆ ಪಾರಾಗುವ ಬಗೆ ಹೇಗೆಂದು ಯೋಚಿಸುತ್ತ, ಆ ಕಂಪಾವುಂಡಿನ ಒಳಗೆ ಕತ್ತಲೆಯಲ್ಲಿಯೇ ಸರಿದು ಸರಿದು, ಗೇಟಿನ ಬಳಿಯಲ್ಲಿದ್ದೊಂದು ಬೇವಿನ ಮರದ ಬುಡದ ಕತ್ತಲೆಯ ರಾಶಿಯಲ್ಲಿ ಅಡಗಿನಿಂತೆ.

ಅದೇ ಸಮಯದಲ್ಲಿ ಗೇಟನ್ನು ಬೀದಿಯಿಂದ ಯಾರೋ ಬಲವಾಗಿ ಬಡೆದರು. ಕೂಡಲೇ ಮನೆಯ ಜಗುಲಿಯಲ್ಲಿದ್ದ ಆಳೊಬ್ಬನು ಓಡಿಬಂದು "ಯಾರು?" ಎಂದು ಕೇಳಿದನು. ಹೊರಗಿನಿಂದ ಒಂದು ಹೆಂಗೊರಳು ಕೇಳಿತು:— "ಸ್ವಲ್ಪ ಬಾಗಿಲು ತೇಗೀಪ್ಪಾ! ಅಯ್ಯಾವ್ರುನ್ನ ಕೊಂಚ ಕಾಣ ಬೇಕು."

"ಯಾರು ನೀನು?"

"ಅಯ್ಯಾ ಇದೇನಪ್ಪಾ ಬಾಗಿಲ್ತೆಗೀದೇನೇ ಕೇಳ್ತಿ? ಬಾಗಿಲ್ತೆಗೀಕೊಂಚ ಹೇಳ್ತೀನಿ."

ಆಳು ಬೀಗ ತಿರುಗಿಸಿ ಬಾಗಿಲುತೆರೆದು—"ಯಾರು? ಏನುಬೇಕು?" ಎಂದು ಕೇಳಿದನು.

"ಇಲ್ಲಿ ವೆಂಕಟೇಶಯ್ಯಂತ ಇದ್ದಾರಲ್ಲಾ?........"

"ಅವರೋ? ಇನ್ನೂ ಮನೆಗೆ ಬರ್ಲಿಲ್ಲ"

"ಏನಪ್ಪ? ಒಂಭತ್ತುವರೆಗಂಟೆಯಾಯ್ತು. ಇನ್ನೂ ಬರ್ಲಿಲ್ವೆ? ಎಲ್ಲಿಗೆ ಹೋಗಿದ್ದಾರೆ?"

"ಯಾರಿಗ್ಗೊತ್ತು? ಸಿನೆಮಕ್ಕೋ ಏನು ಮಣ್ಣೊ?"

"ಹಾಗಾದರೆ ಹತ್ತು ಗಂಟೆಯೊಳಗೆ ಬಂದಾರು. ನಾನಿಲ್ಲೇ ಹೊರಗಿರ್ತೀನಿ."

ಆಗ ಮನೆಯೊಳಗಿಂದ ಧನದಾಸನು ಅವಸರದಿಂದ ಆ ಆಳನ್ನು ಕರೆದನು:—"ನಾಯರ್! ಇಲ್ಲಿಬಾ! ಬೇಗ ಬಾರೊ!"

ಈ ಕರೆಯನ್ನು ಕೇಳಿ ಆಳು ಗಡಿಬಿಡಿಯಿಂದ—"ನೀನಿರೋದಾದರೆ ಇರು. ಹೋಗೋದಾದ್ರೆ ಹೋಗು" ಎಂದಂದು ಅವಳನ್ನು ಹೊರಕ್ಕೆ ತಳ್ಳಿ ಬಾಗಿಲುಹಾಕಲಾರಂಭಿಸಿದನು. ಆಗ ಧನದಾಸನು ಮತ್ತೊಮ್ಮೆ ಅತ್ಯವಸರದಿಂದ ಅವನನ್ನು ಕೂಗಿ ಕರೆದನು ನಾಯರ್ ಬೀಗವನ್ನು ಹಾಗೇ ಬಾಗಿಲಿಗೆ ಸಿಕ್ಕಿಸಿ ಒಳಗೆ ಓಡಿಹೋದನು

"ಹಾ! ದೇವರೆ ಎಂದು ನಾನು ಒಂದೇ ಉಸಿರಿಗೆ ಗೇಟನ್ನು ತೆರೆದು ಬೀದಿಗೆ ಹಾರಿ, ಕತ್ತಲೆಯಲ್ಲಿ ಆ ಹೆಂಗುಸನ್ನು ಎಡವಿ ಮುಗ್ಗರಿಸಿ ಬಿದ್ದೆನು ಆ ಹೆಂಗುಸು, "ಯಾರಮ್ಮ? ಎನ್ನುತ್ತ ನನ್ನನ್ನು ಹಿಡಿದೆತ್ತಿದಳು. ಕತ್ತಲೆಯಾದುದರಿಂದ ಅವಳಾರೋ ನಾನಾರೋ ಏನೂ ಗೊತ್ತಾಗುತ್ತಿದ್ದಿಲ್ಲ. ಅತ್ತ ಧನದಾಸನು ಬಾಗಿಲು ತೆರೆದು ಒಳಗೆ ನನ್ನನ್ನು ಕಾಣದೆ ಗಾಬರಿಯಾಗಿ, ಎಲ್ಲಿ ನನ್ನನ್ನು ಹುಡುಕುತ್ತಾ ಬಂದುಬಿಡುವನೋ ಎಂಬ ಭಯ ಇದರಿಂದ ನಾನು ಬೇಗಬೇಗನೇ ಎದ್ದು—"ಬಿಡು ಬಿಡು; ದುಷ್ಟರು ನನ್ನನ್ನು ಅಟ್ಟಿಸಿಕೊಂಡು ಬರುತ್ತಾರೆ. ತಪ್ಪಿಸಿಕೊಳ್ಳಬೇಕು ನಾನು" ಎಂದಂದು ಮುಂದೆ ಓಡಲಾರಂಭಿಸಿದೆ. ಅವಳೂ ನನ್ನ ಹಿಂದೆ ಹಿಂದೆಯೇ ಬರುತ್ತ—"ಹೆದರಬೇಡಮ್ಮ, ನಾನು ಒಬ್ಬಳು ಹೆಂಗುಸು. ಯಾರಮ್ಮ ನೀನು?" ಎಂದಳು.

"ನಾನೊಬ್ಬಳು ದಿಕ್ಕಿಲ್ಲದ ಅನಾಥೆ ಅಮ್ಮ. ಎಲ್ಲಿಗೆ ಹೋಗಬೇಕೋ ತಿಳಿಯೆ......." ಎಂದಂದು ನಾನು ಮುಂದೆ ಮುಂದೆ ಹೋಗುತ್ತಿದ್ದೆ—

"ಇಲ್ಲೇ ಸಮೀಪದಲ್ಲಿ ನನ್ನ ಮನೆಯಿದೆ. ಈ ರಾತ್ರಿ ನಮ್ಮಲ್ಲಿರಬಹುದು ನೀನು. ಮತ್ತೆಲ್ಲ ನಿಧಾನವಾಗಿ ಮಾತಾಡುವ" ಎಂದು ಆ ಹೆಂಗುಸು ನನ್ನ ಕೈ ಹಿಡಿದು ಕರಕೊಂಡು ಹೋಗಲಾರಂಭಿಸಿದಳು. ಅಷ್ಟರಲ್ಲಿ ನಾವು ಆ ಸಂದು ಬೀದಿಯಿಂದ ಒಂದು ದೊಡ್ಡ ಬೀದಿಗೆ ಸೇರಿದ್ದೆವು.

ಬೀದಿಯಲ್ಲಿ ಜನಸಂಚಾರವಿನ್ನೂ ಅಡಗಿರಲಿಲ್ಲ. ಅಲ್ಲಲ್ಲಿ ದೀಪದ ಕಂಬಗಳು ಉರಿಯುತ್ತಿದ್ದವು. ಆ ಹೆಂಗಸು ನನ್ನನ್ನು ಎರಡುಮೂರು ಸಂದು ಬೀದಿಗಳಲ್ಲಿ ಕರೆದೊಯ್ದು ಬಳಿಕ ಒಂದು ಮನೆಯ ಮುಂದೆ ನಿಂತು ಬಾಗಿಲು ತಟ್ಟುತ್ತ "ಕಮಲೂ! ಕಮಲೂ!" ಎಂದು ಕರೆದಳು. ಉಪ್ಪರಿಗೆಯ ಮೇಲಿನಿಂದ "ಓ" ಎಂಬ ಸ್ತ್ರೀಯಕಂಠವೊಂದು ಕೇಳಿಸಿತು. ಅದರ ಬೆಂಗಡೆಯೇ ಅವಳು ಬಂದು ಬಾಗಿಲುತೆರೆದು– "ಎನಮ್ಮಾ? ಸಿಕ್ಕಿದನೇ ಅವನು? ಇದಾರು? ಎಂದು ಕತ್ತಲೇಯಲ್ಲಿಯೇ ನನ್ನ ಮುಖವನ್ನು ದಿಟ್ಟಿಸಿ ನೋಡಿದಳು. ಅವಳು ಸುಂದರಿಯಾದ ತರುಣಿಯಾಗಿದ್ದಳು.

"ಯಾರಂತ ನನಗೂ ಗೊತ್ತಿಲ್ಲ. ಏನೋ ಕಷ್ಟದಲ್ಲಿ ಸಿಕ್ಕಿ ಬಿದ್ದಿದ್ದಾಳಂತೆ. ಒಳಗೆ ನಡೆ, ಬಾರಮ್ಮಾ" ಎಂದು ನನನ್ನು ಕರೆದುಕೊಂಡು ಬಂದವಳು ನನ್ನ ಕೈ ಹಿಡಿದುಕೊಂಡು ಒಳಗೆ ಹೊಕ್ಕಳು. ನಮ್ಮ ಹಿಂದಿನಿಂದ ತರುಣಿ ಬಾಗಿಲಿಕ್ಕಿಕೊಂಡಳು. ಅವರು ನನ್ನನ್ನು ಉಪ್ಪರಿಗೆಯ ಮೇಲೆ ಕರೆದೊಯ್ದು ಪ್ರಶಸ್ತವಾದೊಂದು ಕೋಣೆಯೊಳಗೆ ಕುರ್ಚಿಯಲ್ಲಿ ಕೂಡಿಸಿದರು.

ಒಳ್ಳೆ ನಾಗರಿಕ ವ್ಯವಸ್ಥೆಯಿಂದ ಕೂಡಿದ ಕೊಟಡಿ. ಎಲೆಕ್ಟ್ರಿಕ್ ದೀಪ, ಫ್ಯಾನು, ಕುರ್ಚಿ–ಮೇಜಿ, ಮಂಚ, ಟೇಬಲ್‌ಕ್ಲಾಕ್, ನಿಲುವುಗನ್ನಡಿ ಮುಂತಾದ ಸುಖೋಪಯೋಗೀ ಅಲಂಕಾರವಸ್ತುಗಳೆಲ್ಲ ತಕ್ಕ ತಕ್ಕ ಸ್ಥಳದಲ್ಲಿ ಒಪ್ಪಿಡಲ್ಪಟ್ಟಿದ್ದವು. ಅಕ್ಕಪಕ್ಕಗಳಲ್ಲಿ ಇನ್ನೂ ಎರಡು ಕೊಟಡಿಗಳಿರುವಂತೆ ಬಾಗಿಲ ತೆರೆಗಳಿಂದ ಗೊತ್ತಾಗುತ್ತಿದ್ದಿತು.

ನನ್ನನ್ನು ಕರೆದುಕೊಂಡ ಆ ಪ್ರೌಢಹೆಂಗುಸು ಸುಮಾರು ೪೦ ವಯಸ್ಸಿಗೂ ಮೀರಿದ್ದಳು. ಯೌವನದಲ್ಲಿ ಬಹಳ ಸುಂದರಿಯೂ ಹಾಗೇಯೇ ಅಂತ್ಯಂತ ವಿಲಾಸಿನಿಯೂ ಆಗಿದ್ದಿರಬೇಕು. ಇನ್ನೊಬ್ಬಳು ಇಪ್ಪತ್ತು ವಯಸ್ಸಿನ ತರುಣಿ. ನೋಡಿದಕೂಡಲೇ ವೇಶ್ಯೆಯೆಂದು ತಟ್ಟನೆ ಗೊತ್ತಾಗುತ್ತಿದ್ದಿತು. ಅವಳ ಆ ನೋಟದ ಗಾಡಿಯೂ, ಉಟ್ಟ ಸೀರೆಯು, ತೊಟ್ಟರವಕೆಯು, ಇಟ್ಟ

ಕುಂಕುಮದ, ಬಾಚಿದ ತಲೆಯು, ಮುಡಿಗೆ ಹೂವಿನ ಮಾದರಿಗಳೂ, ನಡೆ ನುಡಿಗಳಲ್ಲಿರುವ ಬೆಡಗುಬಿನ್ನಾಣಗಳೂ ಸರ್ವಸಾಧಾರಣವಾಗಿರಲಿಲ್ಲ. ಕೌತುಕ ಜನಕವೂ ಮೋಹಕವೂ ಆಗಿದ್ದುವು. ಅಪಾಯದಿಂದ ಪಾರಾಗಿ ಯಾವ ಆಸರೆಗೆ ಹೋಗುವುದೆಂದು ಒಂದೂ ತಿಳಿಯದಿರುವಾಗ, ಹೆಂಗುಸಿನ ಆಸರೆಯೇ ಸಿಕ್ಕಿದ್ದು ನೋಡಿ ಸಮಾಧಾನವಾದ ನನಗೆ, ಈಗ ಹುಲಿಯ ಬಾಯಿಯಿಂದ ತಪ್ಪಿಸಿ ಮೊಸಳೆಯ ಮಡುವಿಗೆ ಬಿದ್ದೆನೇನೋ ಎಂಬ ಸಂದೇಹವುಂಟಾಗ ತೊಡಗಿತು.

ಆಗ ದೊಡ್ಡ ಹೆಂಗುಸು ನನ್ನನ್ನು ಕುರಿತು— "ಏನೂ ಹೆದರಬೇಡಮ್ಮ. ಇದು ನನ್ನ ಸ್ವಂತ ಮನೆ; ಕೆಳಗಿನ ಭಾಗದ ಎರಡು ಮೂರು ಕೊಟಡಿಗಳನ್ನು ಬಾಡಿಗೆಗೆ ಕೊಟ್ಟಿದ್ದೇನೆ. ಇವಳು ಕಮಲೆ ನನ್ನ ಮಗಳು. ಇಲ್ಲಿ ಬೇರೆ ಗಂಡುಸರಾರೂ ಇಲ್ಲ. ನೀನು ನಿರ್ಭಯವಾಗಿರಬಹುದು. ನಿನ್ನದು ಯಾವೂರು ?" ಎಂದು ವಿಚಾರಿಸಿದಳು.

"ಇವರಿಗೆ ತುಂಬಾ ಆಯಾಸವಾಗಿರುವಂತಿದೆ; ಸ್ವಲ್ಪ ಶರಬತ್ತು ಮಾಡಲೆ ?" ಎಂದಳು ಕಮಲೆ.

"ಬೇಡ" ಎಂದು ನಾನಂದೆ. ದೊಡ್ಡವಳು "ಬೇಕು; ಕಮಲಾ. ಶರ್ಬತ್ತು ಮಾಡಿ ತಾರೇ. ಹಾಗೇಯೇ ಬೀರುವಿನಲ್ಲೆರಡು ಮೋಸಂಬೀ ಹಣ್ಣಿವೆ. ಅದನ್ನೂ ಸುಲಿದು ಕೊಡು" ಎಂದಳು.

ಅವಳು ಕೇಳಿದುದಕ್ಕೆ ಯಾವರೀತಿಯಾದ ಉತ್ತರ ಹೇಳಲೆಂದು ಗೊತ್ತಾಗಲಿಲ್ಲ. ಆದರೂ ಹೇಳಿದೆ :—

"ಅಮ್ಮ, ನಿಮ್ಮಿಂದ ಇಂದು ನನ್ನ ಮಾನವೂ ಪ್ರಾಣವೂ ಉಳಿಯಿತು. ತಂದೆ–ತಾಯಿ–ಗಂಡ ಎಂಬ ಮೂರು ಆಧಾರವನ್ನೂ ಕಳೆದುಕೊಂಡವಳು ನಾನು. ಉದ್ಯೋಗವನ್ನರಸಿಕೊಂಡು ಇತ್ತ ಕಡೆ ಬಂದೆ. ಆ ಮನೆಯವನೊಬ್ಬನು ನನಗೇನೋ ದೊಡ್ಡ ಸಹಾಯಮಾಡುವೆನೆಂದು ಹೇಳಿ ನನ್ನನ್ನು ನಂಬಿಸಿ, ಅಲ್ಲೊಂದು ಕೋಣೆಯೊಳಗೆ ಸೆರೆಹಾಕಿದ್ದನು. ದೇವರ ದಯದಿಂದ ನಾನು ಹೇಗೋ ತಪ್ಪಿಸಿಕೊಂಡುಬಂದೆ."

"ಹೀಗಾಯಿತೆ ? ಪಾಪ ! ನಿನ್ನನ್ನು ಸೆರೆಹಾಕಿದವನ ಹೆಸರೇನಮ್ಮ ?"

"ನನಗೇನು ಗೊತ್ತು ? ನಿಮಗೆ ಆ ಮನೆಯವರ ಗುರುತಿದೆಯೇ ?"

"ಅಲ್ಲಿರುವ ಒಬ್ಬನ ಗುರುತು ನಮಗಿದೆ. ಅವನೊಡನೆ ಸ್ವಲ್ಪ

ಮಾತಾಡಬೇಕೆಂತಲೇ ನಾನು ಅಲ್ಲಿಗೆ ಬಂದಿದ್ದೆ ನಮ್ಮ. ಒಂದು ವೇಳೆ ನಿನ್ನನ್ನು ಅವನೇ ಅಲ್ಲಿ ಸಿಕ್ಕಿಸಿ ಹಾಕಿರಬಹುದೇನೋಂತ ? "

ಆ ಒಬ್ಬನು ಯಾರೆಂಬುದು ನನಗೆ ಗೊತ್ತಾಯಿತು. ಎದೆ ಹೆದರಿತು. " ಇದ್ದೀತು ! ಅವನು ಇಲ್ಲಿಗೇನಾದರೂ ಬಂದಾನೆ ? "

" ಯಾಕೆ ನಿನಗೆ ಭಯವಾಗುವುದೊ "

" ತುಂಬ ಹೆದರಿದ್ದೇನೆ ಆ ಮನೆಯಲ್ಲಿರುವ ಇಬ್ಬರು ಸೇರಿಕೊಂಡೇ ನನ್ನನ್ನು ಈ ಗತಿಗೆ ತಂದರಮ್ಮ. "

" ಇಲ್ಲಿ ನಿನಗೇನು ಭಯವಿಲ್ಲ. ಇಲ್ಲಿಗೆ ಅವರಾರೂ ಬರಲಾರರು. ಬಂದರೂ ನಿನ್ನನ್ನು ಅವರ ಕಣ್ಣಿಗೆ ಬೀಳದಂತೆ ಕಾಪಾಡುವೆನು "

" ಹ್ಯಾಗಾದರೂ ಈ ಒಂದು ರಾತ್ರಿ ಕಳೆದರೆ ಸಾಕಾಗಿತ್ತು. ನಾಳೆ ಬೆಳಗ್ಗೆ ನಾನು ಹೊರಟು ಹೋಗುವೆನು "

" ಎಲ್ಲಿಗೆ ಹೋಗುತ್ತಿ ? "

" ಎಲ್ಲಿಗಾದರೂ ಹೋಗುವೆನು. ಇಲ್ಲಿದ್ದು ನಿಮಗೇಕೆ ತೊಂದರೆ ಕೊಡಲಿ ? "

" ಅಯ್ಯೋ ತೊಂದರೆ ಏನು ಬಂತಮ್ಮ ? ಕಷ್ಟಕಾಲದಲ್ಲಿ-ಅದೂ ನಿನ್ನಂಥ ಹೆಂಗುಸರಿಗೆ ಸಹಾಯ ಮಾಡದಿದ್ದರೆ ಮತ್ತೆ ಯಾರಿಗಮ್ಮ ಮಾಡುವುದು ? ಹಿಗೆಲ್ಲಾ ಕಂಡಾಬಟ್ಟೆ ನೀನು ಅಲೆದಾಡಬೇಡ. ಒಂದುದಾರಿ ಕಾಣುವ ವರೆಗಾದರೂ ನೀನು ಇಲ್ಲಿಯೇ ಇರಬಹುದು "

" ಆದರೆ ನನ್ನಲ್ಲಿ ನಿಮ್ಮ ಉಪಕಾರಕ್ಕೆ ಪ್ರತಿಯಾಗಿ ಕೊಡಲು ಏನೂ ಇಲ್ಲವಲ್ಲ ? "

"ಇದೆಂಥ ಮಾತು ? ಹಾಗೆಲ್ಲಾ ನೀನು ಕೊಟ್ಟರೂ ನಾವು ತೆಗೆದು ಕೊಳ್ಳುವವರಲ್ಲ. ಅದಿರಲಿ ಅಮ್ಮ; ನೀನೇನೋ ಉದ್ಯೋಗ ಹುಡುಕುತ್ತಾ ಬಂದೆನೆನ್ನುವಿ ? ಏನು ಉದ್ಯೋಗ ಮಾಡುತ್ತಿ ? ನಿನ್ನನ್ನು ನೋಡಿದರೆ ಕೊಂಚ ವಿದ್ಯೆಕಲಿತವಳಾಗಿ ಕಾಣುತ್ತೀ ? "

" ನಾನು ಮಾಸ್ತರ್ ಕೆಲಸ ಮಾಡಬಲ್ಲೆ. ಎಲ್ಲಾದರೂ ಸಿಕ್ಕಿದರೆ ನೋಡುವಾಂತ, ಬಂದಿದ್ದೇನೆ. "

" ಯಾರಾದರೂ ತಿಳಿದವರ ಸಿಫಾರಸು ಗಿಫಾರಸು ಇಲ್ಲದೆ ಅಂಥಾ ಕೆಲ್ಸ ಹ್ಯಾಗೆ ಸಿಕ್ಕೀತು ? "

"ಇಲ್ಲಿ 'ಸೇವಾಸದನ' 'ಮಹಿಳಾ ಸಮಾಜ' ಅಂತ ಉಂಟಂತೆ; ಅಲ್ಲಿಗೆ ಹೋದರೆ ಏನಾದರೂ ಸಹಾಯಮಾಡಿಯಾರೆಂದು ನಂಬುಗೆ. ಅಲ್ಲಿಗೆ ಕರೆದೊಯ್ಯುತ್ತೇವೆಂದು ಹೇಳಿಯೇ ಆ ಮೋಸಗಾರರು ಮೋಸಪಡಿಸಿದರು."

"ಪಾಪ! ಈ ಮದ್ರಾಸಿನಲ್ಲಿ ಎಂತೆಂಥವರಿದ್ದಾರೆ ಗೊತ್ತೇ ಅಮ್ಮ? ಬಹಳ ಜಾಗ್ರತೆ ಬೇಕು. ಯಾವುದಕ್ಕೂ ನೀನು ನಾಲ್ಕಾರು ದಿನ ಇಲ್ಲೇ ಇರು. ದುಡುಕಿ ಹೋಗಿಬಿಡಬೇಡ."

ಅಷ್ಟರಲ್ಲಿ ಕಮಲಾ ಶರಬತ್ತನ್ನೂ, ಹಣ್ಣಿನ ತಟ್ಟೆಯನ್ನೂ ತಂದು ನನ್ನ ಮುಂದಿಟ್ಟಳು. ಆಗ ಅವಳ ಕೊರಳಿನ ಕಡೆಗೆ ನನ್ನ ಕಣ್ಣು ಸಹಜ ವಾಗಿಯೇ ಹೋಯಿತು ಅಲ್ಲಿ ಥಳಥಳಿಸುವ— ವಿದ್ಯುದ್ದೀಪದ ಕಾಂತಿಯಲ್ಲಿ ಹೊಳೆದ ಆ ಬೋರಿಸರವು, ನನ್ನ ಸರವನ್ನು ನನಗೆ ತಟ್ಟನೆ ನೆನಪೂಡಿಸಿತು. ಹಾ! ನನ್ನದೇ ಸರವಿದು! ದೊಡ್ಡ ದೊಡ್ಡ ಚಿನ್ನದ ಗುಂಡುಗಳ ಆ ಮಾದರಿಯ ಸರವನ್ನು ಮದರಾಸು ಪ್ರಾಂತದವರು ಮಾಡಿಸಿಕೊಳ್ಳುವುದಿಲ್ಲ. ಅದು ದಕ್ಷಿಣಕನ್ನಡದ ನಮೂನೆ. ನನ್ನ ತಂದೆಗೆ ಸ್ವಂತ ಊರಿನಲ್ಲಿ ಅವರ ಅಕ್ಕನು ಕೊಟ್ಟ ಸರವಲ್ಲವೇ ಅದು? ಅದರಲ್ಲಿ ನನ್ನ ತಂದೆಯ ಹೆಸರೂ ಇದೆ ಕಮಲೆಯ ಕೊರಳಿನಲ್ಲಿರುವ ಈ ಸರದಲ್ಲಿ ಆ ಹೆಸರಿನ ಗುರುತೂ ಇದ್ದರೆ ಮತ್ತೆ ಸಂದೇಹವೇನಿದೆ? ಆಹಾ! ನನ್ನ ಗಂಡನೆನಿಸಿದ ವೆಂಕಟೇಶ ರಿಗೂ ಇವಳಿಗೂ ನಿಕಟ ಸಂಬಂಧವಿದೆಯೆಂದು ಈಗ ನನಗೆ ಪ್ರತ್ಯಕ್ಷವಾ ಯಿತು. ಇದನ್ನು ನೆನೆದುಕೊಳ್ಳುತ್ತ ಶರಬತ್ತನ್ನೂ ಕೊಂಚ ಹಣ್ಣನ್ನೂ ತೆಗೆದುಕೊಂಡೆ. ಆ ಮೇಲೆ ಅವರು ನನ್ನನ್ನು ಬದಿಯ ಕೋಣೆಯೊಳಗೆ ಮಂಚದಲ್ಲಿ ಮಲಗಿಕೊಳ್ಳುವಂತೆ ಒತ್ತಾಯಪಡಿಸಿದರು. ನಾನು ನೆಲದಲ್ಲಿ ಚಾಪೆಯ ಮೇಲೆಯೇ ಮಲಗಿಕೊಂಡೆ. ಆದರೆ ನನಗೆ ನಿದ್ದೆ ಬರಬೇಕಲ್ಲ?

೭

ನಡುವಿನ ಆ ವಿಸ್ತಾರವಾದ ಕೋಣೆಯಲ್ಲಿ ಆ ತಾಯಿ-ಮಗಳಿಬ್ಬರೂ ಮಲಗಿದ್ದರು. ಏನೋ ಪಿಸಪಿಸನೆ ಮಾತಾಡುತಲೇ ಇದ್ದರು. ಸುಮಾರು ಒಂದು ಗಂಟೆ ಸರಿಯಿತು. ಅವರು ಮತ್ತೆ ದೀಪವನ್ನು ಬೆಳಗಿಸಿದರು. ದೊಡ್ಡ ಹೆಂಗುಸು ಮೆಲ್ಲನೆ ನಾನು ಮಲಗಿರುವ ಕೋಣೆಯ ಬಾಗಿಲನ್ನು ತೆರೆದು ನನ್ನ ಚಾಪೆಯಬಳಿ ಬಂದು "ಏನಮ್ಮಾ ನಿದ್ದೆ ಬಂತೆ?" ಎಂದು ನನ್ನನ್ನು ಮಾತಾಡಿಸಿದಳು. ನಾನು ಏನೂ ಉತ್ತರಕೊಡದೆ ಬಹಳ ಗಾಢ

ವಾಗಿ ನಿದ್ದೆ ಮಾಡುತ್ತಿರುವವಳಂತೆಯೇ ನಟಿಸಿದೆನು. ಸ್ವಲ್ಪಹೊತ್ತು ಅವಳು ನನ್ನ ಬಳಿಯಲ್ಲೇ ನಿಂತಿರುವಂತೆ ಭಾಸವಾಯಿತು. ಕಮಲೆಯೂ ಅವಳ ಬಳಿಗೆ ಬಂದು ನಿಂತ ಸದ್ದೂ ಕೇಳಿತು. "ಒಳ್ಳೇ ನಿದ್ದೆ. ತುಂಬ ಆಯಾಸ ಪಟ್ಟಿದ್ದಾಳೆ. ಚಾಪೆ ಮೂಸುತ್ತಲೇ ನಿದ್ದೆ ಬಂತು ಅಮ್ಮ, ಈಗಲೇ ಬೇಡ. ಇನ್ನೂ ಸ್ವಲ್ಪಹೊತ್ತು ಹೋಗಲಿ" ಎಂದು ಪಿಸುಗುಟ್ಟಿದಳು ಕಮಲೆ.

ನಾನು ಕಿವಿಯನ್ನು ಬಹಳ ಸೂಕ್ಷ್ಮವಾಗಿ ಮಾಡಿಕೊಂಡೆನು. ಊರೆಲ್ಲಾ ನಿಃಶಬ್ದವಾಗಿದ್ದುದರಿಂದ, ಅವರ ಆ ಪಿಸುಮಾತುಗಳು ನನ್ನ ಕಿವಿಗೆ ಬೀಳು ತಿದ್ದುವು.

ತಾಯಿಯೆಂದಳು:— "ಅಲ್ಲೇ ಇವಳು ಎಷ್ಟು ಚಂದಾಗಿದ್ದಾಳೆ ನೋಡೇ! ಇದನ್ನು ನೋಡಿದರೆ ನನಗೆ ಇನ್ನೊಂದು ಯೋಚನೆ ಬರುತ್ತೆ."

"ಏನಮ್ಮ?"

"ಇವಳ ಕುತ್ತಿಗೆಯ ಸರವೂ ಕೈಯ ಬಳೆಗಳೂ ಏನೊಂದಿನ್ನೂರು ರೂಪಾಯಿಯಾದೀತು. ಇದನ್ನೀಗ ನಾವು ಜಾರಿಸಿಬಿಟ್ಟರೆ, ನಾಳೆ ನಮ್ಮೊಂದಿಗೆ ಏನಾದರೂ ಜಗಳಮಾಡಿಯಾಳಾಂತ? ಸ್ವಲ್ಪ ಇಂಗ್ಲೀಷ್ ಕಲಿತವಳು!"

"ಹೌದಮ್ಮ."

ಮತ್ತೆ ತಾಯಿಯೇ ಧೈರ್ಯದಿಂದ— "ಗಲಾಟೆ ಮಾಡಿದರೇನಂತೆ? ನಾವೇನು ಕಂಡೆವಮ್ಮ ನಿನ್ನ ನಗ. ನಮಗೊಂದೂ ಗೊತ್ತಿಲ್ಲವೆಂದರೆ ಏನು ತಾನೇ ಮಾಡಿಯಾಳು? ಕಡೆಗೆ ಇಲ್ಲಿ ನಿಲ್ಲದೆ ಹೊರಟೇ ಹೋದಾಳು. ಆದರೆ ಇದಕ್ಕಿಂತ ದೊಡ್ಡ ಲಾಭ ಇವಳಿಂದ ಸಿಕ್ಕೀತೇನೋಂತ ಯೋಚನೆ ಬರುತ್ತೆ ನನಗೆ!"

"ಅದೇನಮ್ಮ?"

"ಈಗ ಈ ನಗಗಳನ್ನು ಜಾರಿಸಿಕೊಳ್ಳುವ ಬದಲಿಗೆ, ಇವಳನ್ನು ಉಪಾಯವಾಗಿ ಇಲ್ಲಿಯೇ ಇಟ್ಟುಕೊಂಡು, ಮೆಲ್ಲನೆ ನಮ್ಮವೃತ್ತಿಗೇ ಹಚ್ಚಿದರೇನೂಂತ?"

"ಅದಕ್ಕೆ ಇವಳು ಒಪ್ಪಿಯಾಳೇ ಅಮ್ಮ?"

"ನೀನೊಬ್ಬಳು ಶುದ್ಧ ಮಡ್ಡಿ ಕಾಣೆ! ಮತ್ತೆ ಇವಳು ಭಾರೀ ಪತಿ ವ್ರತೇಂತ ಮಾಡಿದಿಯೇನೆ? ಊರು ಬಿಟ್ಟು ಓಡಿಬಂದ ಅನಾಥೆ ಅಂದರೆ

ಅರ್ಥವೇನೂಂತ ಮಾಡಿದಿ ? ಎಲ್ಲಿಯೋ ಅಡ್ಡದಾರಿಗೆ ಬಿದ್ದವಳೇ. ಕುಲ ದಿಂದ ಹೊರಗೆದೂಡಿರಬೇಕು ಇವಳನ್ನ. ಇವಳು ನಮ್ಮದಾರಿಗೆ ಬೀಳುವು ದೇನೂ ಕಷ್ಟವಿಲ್ಲ ಹೆಣ್ಣು ಎಷ್ಟು ಚೆನ್ನಾಗಿದ್ದಾಳೆ ನೋಡಿದಿಯಾ ? ಕೇಳಿ ದಷ್ಟು ಕೊಟ್ಟಾರು "

ಅಷ್ಟರಲ್ಲಿ ಕೆಳಗೆ ಬಾಗಿಲುತಟ್ಟಿದ ಸದ್ದಾಯಿತು. "ಯಾರಿರಬಹು ದಮ್ಮ ? " ಎಂದು ಕೇಳಿದಳು ಕಮಲೆ.

" ನಮ್ಮ ರಿಕ್ಷಾದವನು ಯಾರನ್ನಾದರೂ ಕರಕೊಂಡುಬಂದಿದ್ದಾನಾ ದೀತು. ಸೆಕೆಂಡ್ ಶೋ ಸಿನಿಮಾ ಬಿಟ್ಟಸಮಯವಲ್ಲವೆ ? ನಾನುಹೋಗಿ ಬಾಗಿಲು ತೆರೀತೇನೆ. ನೀನು ತಯಾರಾಗಿರು. "

ಕೆಳಗಿನಿಂದ " ಕಮಲೂ ! ಕಮಲೂ ! " ಎಂಬ ಕರೆಯೇ ಕೇಳಿ ಬಂತು. ಆ ಕೊರಳಿನ ಗುರುತು ನನಗೂಹತ್ತಿತು. ಅವರಿಗೂ ಹತ್ತಿತು. " ಓಹೊ ! ವೆಂಕಟೇಶ್ ! " ಎಂದಳು ಕಮಲೆ

" ಹೌದು, ಇವತ್ತು ಬಂದನೇ ಮಹಾರಾಯ ! ಇಷ್ಟು ದಿನ ಎಲ್ಲಿಗೆ ಹೋದನೊ ! ಕಮಲೂ, ಈ ಹೆಂಗಸು ಇಲ್ಲಿರುವುದು ಅವನಿಗೆ ಗೊತ್ತಾಗ ಬಾರದು ಕೋಣೆಗೆ ಬೀಗ ಹಾಕಿ ತೆರೆ ಎಳೆದಿಡು. ಮತ್ತೆ ನೋಡು, ಈ ದಿನ ಅವನನ್ನ ಪೂರಾ ಪರೀಕ್ಷೆ ಮಾಡಿಬಿಡು. ಏನೂ ಪಸೆ ಇಲ್ಲದಿದ್ದರೆ ಇನ್ನಿಲ್ಲಿಗೆ ಬರುವುದೇ ಬೇಡಾನ್ನು " ಎಂದು ಜಡೆದು ಹೇಳಿ, ತಾಯಿ ಕೆಳಗೆ ಹೊರಟುಹೋದಂತೆ ತೋರಿತು. ಕಮಲಾ ನನ್ನ ಕೋಣೆಗೆ ಬೀಗ ಹಾಕಿ ಕೊಂಡ ಶಬ್ದವೂ ಕೇಳಿತು.

ನನಗೆ ಬರುವ ನಿದ್ದೆಯ ಸುಳಿವುಕೂಡಾದೂರ ಹೊರಟುಹೋಯಿತು. ಕೋಣೆಯೊಳಗೆ ನಡೆಯುವ ಸಂಭಾಷಣೆಗಳನ್ನು ಕಿವಿಗೊಟ್ಟು ಕೇಳಲಾರಂಭಿ ಸಿದೆನು.

" ಏನ್ರೀ ವೆಂಕಟೇಶರೆ ! ಬಹಳ ಅಪರೂಪವಾಗಿ ಮದುವಣಿಗನ ಹಾಗೆ ಇವತ್ತು ಬಂದಿರಲ್ಲಾ ? ನಮ್ಮನ್ನು ತೀರ ಮರೆತೇಬಿಟ್ಟರೇನೋಂತ ಮಾಡಿದೆ" ಕಮಲೆಯ ತಾಯಿಯೆಂದಳು.

" ಇವರಿಗೇನಮ್ಮಾ ಮನ್ಮಥನ ಹಾಗಿದ್ದಾರೆ. ಆ ಬಂಗಲೆಯ ಹೊಸ ಬಿಡಾರದಲ್ಲಿ ನನಗಿಂತ ಹತ್ತು ಪಾಲು ಹೆಚ್ಚಾದ ಸುರಸುಂದರಿಯೊಬ್ಬಳು ಇವರಿಗೆ ಸಿಕ್ಕಿದಳೋ ಏನೋ ! " ಕಮಲೆಯ ಕೊಂಕು ನುಡಿ.

"ಕಮಲೂ! ನಿನ್ನ ಈ ದಿವ್ಯಸೌಂದರ್ಯ ರಾಸಿಯ ಮುಂದೆ ಯಾವ ಸೌಂದರ್ಯವು ತಾನೇ ಸ್ಪರ್ಧಿಸುವ ಧೈರ್ಯ ಮಾಡೀತು? ಹಾಗೆಲ್ಲಾ ತಿಳಿದುಬಿಡಬೇಡ ಕಮಲಾ. ನನ್ನ ಮಿತ್ರಶ್ರೇಷ್ಠನಾದ ಧನದಾಸ ಮುದಲಿ-ಯಾರ್ ರಾತ್ರಿಯಲ್ಲಿ ನನ್ನನ್ನು ಮನೆಗೆ ಹೊರಡಲು ಬಿಡದಾದನು. ಒಬ್ಬನೇ ಇರಲು ಬೇಸರ ಅವನಿಗೆ. ನಾನು ನಿನಗೆ ಮೊದಲೇ ಹೇಳಲಿಲ್ಲವೇ ನಾಲ್ಕು ದಿನ ನಾನು ಬರಲಾರೇಂತ?"

"ಅಂಥಾ ಮಿತ್ರ ಇವತ್ತು ನಿಮ್ಮನ್ನು ಹ್ಯಾಗೆ ಬಿಟ್ಟನಪ್ಪ?" ಕಮಲೆಯ ಪ್ರಶ್ನೆ.

"ಇವತ್ತು ಅವನಿಗೆ ತಕ್ಕ ಜತೆ ಸಿಕ್ಕಿಬಿಟ್ತು."

"ಓಹೊ! ಹಾಗೇನು ಮತ್ತೆ? ಇಷ್ಟು ಹೊತ್ತೇಕೋ ನಿಮಗೆಬರ ಲಿಕ್ಕೆ? ಸಿನೇಮಕ್ಕೆ ಹೋದಿರಾ?" ಕಮಲೆಯ ತಾಯಿ ಕೇಳಿದಳು.

"ಹೌದೌದು. ಸಿನಿಮಾನೋಡಿ ಬಹಾಳ ದಿನಾಯ್ತೂಂತ ಇವತ್ತು ಹೋಗಿದ್ದೆ."

"ಅದೇ ನೀವು ನಾಲ್ಕುದಿನದಿಂದ ನಮ್ಮನ್ನು ವಿಚಾರಿಸಲಿಕ್ಕೆ ಬಾರದ್ದು ನೋಡಿ, ನಮಗೆ ತುಂಬ ಕಷ್ಟವಾಯಿತು. ನಿಮ್ಮನ್ನು ಕಂಡು ಮಾತಾಡ ಬೇಕಂತ ನಾನು ಆಗ ಒಂಭತ್ತುವರೆ ಗಂಟೆ ಸಮಯಕ್ಕೆ ಧನದಾಸರ ಮನೆಯ ಬಳಿಗೆ ಬಂದಿದ್ದೆ. ನೀವಿನ್ನೂ ಬರಲಿಲ್ಲ ಅಂದ ಆಳು."

"ಓಹೊ! ಅದೇನು ಅಷ್ಟು ಅರ್ಜಂಟು ನನ್ನಿಂದ?"

"ಅರ್ಜಂಟೆಂದರೆ ನೋಡಿದಿರಾ, ನಾವು ನಿಮ್ಮೊಬ್ಬರನ್ನೇ ನಂಬಿಕೊಂಡಿದ್ದೇವಷ್ಟೆ? ಖರ್ಚಿಗಿಲ್ಲದೆ ಬಹಳ ಕಷ್ಟವಾಗಿದೆ. ನಿಮ್ಮಿಂದ ನಾಲ್ಕು ತಿಂಗಳ ವರಮಾನ ನೂರುರೂಪಾಯಿ ಬಾಕಿಯಾಗಿದೆ ನೋಡಿ."

"ಹೌದು ಅದಕ್ಕಾಗಿ ನಾನೇನು ಮಾಡಲಿ? ಮೊದಲು ನಿಮಗೆ ನಾನ್ನೂರು ರೂಪಾಯಿ ಇಡಗಂಟಾಗಿ ಕೊಡಲಿಲ್ಲವೆ? ಈ ಚಿನ್ನದ ಬೋರೀ ಸರಕ್ಕೆ ಬೆಲೆಯೇ ಇಲ್ಲವೇನು?"

"ಒಳ್ಳೇಲೆಕ್ಕಾಚಾರ ನಿಮ್ಮದು. ಮೊನ್ನೆ ಉಂಡರೆ ಇಂದು ಹಸಿವಾಗುವುದಿಲ್ಲವೆ?"– ಕಮಲೆ ಕೇಳಿದಳು

"ನಿಜನಿಜ. ಹಾಗಾದರೆ ಒಂದೇ ಬಾರಿ ಹೆಚ್ಚಾಗಿ ನಿಮಗೆ ಕೊಡುವುದಕ್ಕಿಂತಲೂ ತಿಂಗತಿಂಗಳಿಗೆ ಲೆಕ್ಕಪ್ರಕಾರ ಕೊಡುತ್ತಾ ಬಂದರೆ ಸಾಕೆಂದ

ಹಾಗಾಯಿತು. ”

ಕಮಲೆ ಉತ್ಸಾಹದ ಮೇಲು ದನಿಯಿಂದ ಕೂಗಿದಳು– “ ಓಹೊಹೊ! ಅಮ್ಮ! ಇಂದು ಇವರ ಕಿಸೆಯಲ್ಲಿ ದೊಡ್ಡ ನೋಟಿನ ಕಟ್ಟೇ ಉಂಟು! ಒಳ್ಳೇ ಗಟ್ಟಿಗರಿದ್ದಾರಿವರು! ಎಷ್ಟು ತಂದಿದ್ದೀರೀ ಇವತ್ತು ? ”

ಎಷ್ಟು ತಂದರೇನಾಯಿತು ? ನಿನಗಂತೂ ತಿಂಗತಿಂಗಳಿಗೆ ಲೆಕ್ಕಪ್ರಕಾರ ಕೊಟ್ಟರೆ ಸಾಕಷ್ಟೆ ? ”

ಆಗ ಕಮಲೆಯ ತಾಯಿ— “ ಏನ್ರೀ ನೀವು! ಏನೋ ಮಾತಿಗೆ ಮಾತಾಗಿ ಹೇಳಿಬಿಟ್ರೆ, ಹೀಗೆಲ್ಲಾ ತಿಳ್ಕೊಂಡು ಬಿಡೋದೇ ನೀವು? ನೀವು ಯಾವಾಗಂದರಾವಾಗ ಹೀಗೆ ದಯಮಾಡುತ್ತಿದ್ದರೆ ಸಾ ಲ್ಲಾ ಎಷ್ಟಿದೆ ಈಗ? ”

“ ನಾನ್ನೂರು! ”

“ ನಾನ್ನೂರು ? ”

“ ಹೌದು ಕಮಲಾ! ಹಣದ ವಿಷಯದಲ್ಲಿ ಇನ್ನೇನೂ ಹೆದರಿಕೆಯಿಲ್ಲ. ಹಣದಿಂದ ಕೊಬ್ಬಿದ ಧನದಾಸ ಮುದಲೀ ಅದೃಷ್ಟವಶದಿಂದ ನನ್ನ ಕೈಯೊಳಗಿದ್ದಾನೆ. ನನಗೆ ಸಿಕ್ಕಿದ್ದರಲ್ಲಿ ಮುಕ್ಕಾಲು ಭಾಗ ನಿನಗಲ್ಲದೆ ಇನ್ನಾರಿಗೆ ಕೊಡಲಿ ನಾನು? ಎಲ್ಲಿ ಕಮಲಾ, ಈ ನೋಟುಗಳನ್ನು ತಾಯಿಯ ಹತ್ತರ ಕೊಟ್ಟು, ಕೊಂಚ ಅಮೃತೋದಕ ಕೊಡು ನೋಡುವಾ.... ... ”

ಅನಂತರ ಬೀರೋ ತೆರೆದಂತೆ ಮುಚ್ಚಿದಂತೆ ಮೊದಲಾದ ಕೆಲವು ಶಬ್ದಗಳಾದುವು. ಕಮಲೆಯ ತಾಯಿ ಆಚೆಯ ಕೋಣೆಯೊಳಗೆ ಹೊಕ್ಕು ಬಾಗಿಲು ಹಾಕಿಕೊಂಡದ್ದೂ ಗೊತ್ತಾಯಿತು. ಆ ಮೇಲೆ ಕೇಳಿ ಬಂದುದೆಂದರೆ ಕಮಲಾ–ವೆಂಕಟೇಶರ, ಮಧುಪಾನ–ಸರಸಸಲ್ಲಾಪಾದಿ ಲೀಲೆಗಳೇ ಆಗಿದ್ದುವು. ಅದನ್ನು ಕೇಳುತಿರುವಾಗ, ನರಕದ ತೀರ ಸಮೀಪದಲ್ಲಿರುವ ಅನುಭವವು ನನಗಾಯಿತು.

ಇಂತಹ ಸ್ಥಳದಿಂದ ಈಗ ನಾನು ಹೇಗೆ ಪಾರಾಗಲಿ ? ಯಾವ ಅಪಾಯಕ್ಕೆ ಭಯಪಟ್ಟು ತಪ್ಪಿಸಿಕೊಂಡೆನೋ ಅಂತಹ ಅಪಾಯವು ಇಲ್ಲಿ ಬಹಳ ಸುಲಭವಾಗಿ ನನ್ನನ್ನು ಕಬಳೀಕರಿಸಲು ಬಾಯಿತೆರೆದು ಕಾದಿದೆ. ಈ ಮಾನಜೀವಿನಿಯರು ನನ್ನನ್ನು ಒಲೆಂದಿಲ್ಲೊಂದು ಉಪಾಯದಿಂದ ಇಲ್ಲಿಯೇ ನಿರ್ಬಂಧಗೊಳಿಸಿ, ರಾತ್ರಿಯಲ್ಲಿ ಯಾವನಾದರೊಬ್ಬ ಮಧು ಮತ್ತನ್ನನ್ನು ಒಳ

ಹೊಗಿಸಿ ಬಿಟ್ಟರೆ ನನ್ನ ಗತಿ ಏನಾಗಬೇಕು? ಅಲ್ಲದೆ ನನ್ನ ಈ ಸ್ಥಿತಿಗೆ ಯಾವನು ಮೂಲ ಕಾರಣನೋ ಅವನಿಗೂ ಈ ಮನೆಗೂ ನಿಕಟ ಸಂಬಂಧ ವಿದೆಯಲ್ಲಾ! ನಾನು ಇಲ್ಲಿರುವುದು ಅವನಿಗೆ ಗೊತ್ತಾಗಿಬಿಟ್ಟರೆ ನನ್ನನ್ನು ನಾಯಿಯಪಾಲು ಮಾಡಿಸಲಿಕ್ಕೂ 'ಅವನು' ಹಿಂದೆಮುಂದೆ ನೋಡಲಿಕ್ಕಿಲ್ಲ, ಹೌದು. ಅವನು ಇನ್ನು ನನ್ನ ಪತಿಯಲ್ಲ! ಅವನ 'ಅವರು' ಎಂಬ ಗೌರವ ಭಾವವು ಅಳಿದುಹೋಯಿತು ನನ್ನಲ್ಲಿ! ಸೇಡಿನ ಬೆಂಕಿ ಹೊತ್ತಿಕೊಂಡು ಉರಿಯುತ್ತಿದೆ ನನ್ನ ಹೃದಯದಲ್ಲಿ! ಆ ಉರಿಯಲ್ಲಿ ಮದುವೆಯ ಉರುಳು ಸುಟ್ಟು ಜಾಡಿಲ್ಲದಂತೆ ಅಳಿಸಿ ಹೋಯಿತು!........ ಪುಣ್ಯಕ್ಕೆ ಆ ಹೆಂಗುಸು ನನ್ನನ್ನು ತಮ್ಮ ಸ್ವಾರ್ಥಕ್ಕೆ ಉಪಯೋಗಿಸಿಕೊಳ್ಳುವ ಹಂಚಿಕೆ ಮಾಡಿದುದ ರಿಂದ, ನನ್ನ ಇರುವಿಕೆಯನ್ನು ಅವರು ಅವನಿಗೆ ತಿಳಿಸುವ ಸಂಭವವಿಲ್ಲ. ಅವನು ಧನದಾಸನಿಗೆ ಜತೆಮಾಡಿಕೊಟ್ಟೆನೆಂದು ಈ ಹೆಂಗುಸರೊಡನೆ ಹೇಳಿದು ದಕ್ಕೂ, ನಾನು ಅದೇ ಮನೆಯಿಂದ ತಪ್ಪಿಸಿಕೊಂಡಿರುವುದಕ್ಕೂ ಈ ಹೆಂಗು-ಸರು ಸಂಬಂಧವನ್ನು ಊಹಿಸಿಕೊಂಡಿರುವರಾದುದರಿಂದ, ನನ್ನ ಇರುವಿಕೆ ಯನ್ನು ಸದ್ಯ ಈ ಹೆಂಗುಸರು ಅವನಿಗೆ ತಿಳಿಸಲಾರರೆಂಬುದಕ್ಕೆ ಸಂದೇಹವಿರ ಲಿಲ್ಲ. ಆದರೆ ನಾನು ಈ ಪಂಜರದಿಂದ ಪಾರಾಗುವ ಬಗೆಹೇಗೆ? ನಾಳೆ ಹಗಲು ಕಳೆಯುವುದರೊಳಗಾಗಿ ಪಾರಾಗಿ ಹೋಗಲೇಬೇಕು. ಸುಮ್ಮನೆ ಹಾರಿ ಹೋದರೆ ಏನಾದ ಹಾಗಾಯಿತು? ಈ ದುಷ್ಟರಿಗೆ ತಕ್ಕ ದಂಡನೆ ಬೇಡವೆ? ಬೇಕೇಬೇಕು! ನನ್ನ ಹೃದಯದಲ್ಲಿ ಇನ್ನು ಕ್ಷಮೆಗೆ ಸ್ಥಾನವೇ ಇಲ್ಲ. ನನ್ನನ್ನು ನೋಡಿ ಆ ಹಿರಿಯ ಘಾತಕಿ 'ಕಲಿತವಳಾಗಿ ಕಾಣುತ್ತಾಳೆ, ಏನಾದರೂ ಗಲಾಟೆಮಾಡಿದರೆ?—' ಎಂದು ಸಂದೇಹಿಸಿದಳಲ್ಲವೆ? ಅವಳ ಆ ಸಂದೇಹ ವನ್ನು ಸತ್ಯವಾಗಿಸದಿದ್ದರೆ, ನಾನು ಕಲಿತ ಹುಡುಗಿಯಾಗಿ ಪ್ರಯೋಜನ-ವೇನು?........... ....

ನಿದ್ದೆ ನನ್ನ ಸಮೀಪಕೂಡಾ ಸುಳಿಯಲಿಲ್ಲ. ಮಿಳಮಿಳನೆ ಕಣ್ಣು ಬಿಟ್ಟು ಕೊಂಡೇ ಯೋಚಿಸುತ್ತಿದ್ದೆ. ದೂರದಲ್ಲಿ ಕೋಳಿಕೂಗಿದ ಸುದ್ದು ಕೇಳಿತು. ಬೀದಿಯಲ್ಲಿ ಒಂದೆರಡು ಮೋಟಾರುಗಳೂ ಜಟಕಾಗಳೂ ಓಡಾಡಲಾರಂಭಿ ಸಿದುವು. ಜನರ ನಡೆದಾಟವೂ ಕೆಮ್ಮಿನ ದನಿಗಳೂ ಕೇಳಬರತೊಡಗಿದವು. ಗೊಲ್ಲರು ಮನೆಮನೆಗೂ ದನಗಳನ್ನು ಅಟ್ಟಿಕೊಂಡು ಬಂದು "ಪಾಲ್, ಪಾಲೋ— ಅಮ್ಮ!" ಎಂದು ಮುಂತಾಗಿ ಕೂಗ ತೊಡಗಿದರು. ಕಾಗೆ

ಕೂಗತೊಡಗಿದಾಗ ಪ್ರಪಂಚವೆಲ್ಲ ಎಚ್ಚತ್ತುಕೊಂಡಿತು.

ಆದರೂ ನಾನಿರುವ ಆ ಉಪ್ಪರಿಗೆಯಲ್ಲಿ ಯಾರೂ ಎಚ್ಚತ್ತಂತೆ ತೋರ ಲಿಲ್ಲ ಹೇಗೆ ಎಚ್ಚತ್ತಾರು? ಅವರು ಮಲಗುವಾಗ ಮೂರು ಜಾಮ ಮೀರಿ ಹೋಗಿತ್ತಲ್ಲವೆ?

ನಾನು ಮಲಗಿರುವ ಕೋಣೆಗೆ ಒಂದು ಕಿಟಕಿ ಇತ್ತು. ಹಗಲಿನ ಮೊದಲಬೆಳಕು ಆ ಕಿಟಕಿಯೊಳಗಿನಿಂದ ತೂರಿ ಬಂದು, ಕೋಣೆಯೊಳಗಿನ ವಸ್ತುಗಳೆಲ್ಲಾ ಚೆನ್ನಾಗಿ ಗೋಚರವಾಗತೊಡಗಿದುವು. ನಾನು ಎದ್ದು ಕಿಟಕಿಯ ಬಳಿಗೆ ಹೋಗಿ ಹೊರಗೆ ಬಾಗಿ ನೋಡಿದೆ. ಕೆಳಗೆ ಅಗಲಕಿರಿ ದಾದೊಂದು ಬೀದಿ. ದೊಡ್ಡ ರಸ್ತೆಯ ಕವಲು ಬೀದಿಯದು. ಮದರಾಸಿ ನಂತಹ ಮಹಾನಗರದಲ್ಲಿ ಯಾವ ಸಂದುಬೀದಿಗಳಲ್ಲಿಯೂ ಜನಸಂಚಾರ ಕ್ಕೇನೂ ಮೋಸವಿರಲಿಲ್ಲ. ಆ ಬೀದಿಯಲ್ಲಿ ಸಂಚರಿಸುತ್ತಿದ್ದವರನ್ನು ನೋಡಿ ನನಗೆ ತುಂಬ ಧೈರ್ಯವಾಯಿತು.

ಮತ್ತೆ ಒಳಕ್ಕೆ ತಿರುಗಿ ಹುಡುಕುಗಣ್ಣಿನಿಂದ ನೋಡಿದೆ. ಒಂದು ಮೂಲೆಯಲ್ಲಿ ಒಂದು ಪಿಟೀಲುಪೆಟ್ಟಿಗೆಯೂ ಅದರ ಬದಿಯಲ್ಲಿ ಒಂದು ನೋಟುಪುಸ್ತಕವೂ ಇದ್ದುವು. ಪುಸ್ತಕದ ಬಳಿಯಲ್ಲಿ ಒಂದು ಪೆನ್ಸಿಲೂ ಇತ್ತು. ಆಹಾ! ಗೆಲ್ಮೆಯಿಂದ ನನ್ನ ಕಣ್ಣರಳಿತು. ಆ ನೋಟುಪುಸ್ತಕ ವನ್ನು ಬಿಡಿಸಿ ನೋಡಿದೆ; ಪೆನ್ಸಿಲಿನಿಂದ ಅನೇಕ ಹಾಡುಗಳು ಬರೆಯಲ್ಪಟ್ಟಿ ರುವ ಪುಸ್ತಕ. ಅದರ ಕಡೆಯ ಭಾಗದಲ್ಲಿದ್ದ ಒಂದು ಖಾಲೀ ಕಾಗದವನ್ನು ಹರಿದು ಪೆನ್ಸಿಲಿನಿಂದ ಬೇಗಬೇಗನೇ ಹೀಗೊಂದು ಒಕ್ಕಣೆಯನ್ನು ಬರೆದೆನು.

“ ಮಾನ್ಯ ಪೋಲೀಸ್ ಅಧಿಕಾರಿಗಳಿಗೆ,

ನಾನೊಬ್ಬಳು ತರುಣಿ, ಈ ಮನೆಯಲ್ಲಿ ಆಪತ್ತಿಗೆ ಸಿಕ್ಕಿಬಿದ್ದಿರುತ್ತೇನೆ. ನನ್ನ ಕಳವು ಹೋದ ಆಭರಣವೊಂದು ಈ ಮನೆಯವಳ ಮೈಯಲ್ಲಿಇದೆ. ಇದಕ್ಕೆಲ್ಲಮೂಲಕಾರಣನಾದ ಪುರುಷನೂ ಇಲ್ಲಿಯೇಇದ್ದಾನೆ. ಆದ್ದರಿಂದ ತಾವು ಕೂಡಲೇ ಸಹಾಯಕರಾಗಿಬಂದು, ಇಲ್ಲಿ ನಿರ್ಬಂಧಿಸಲ್ಪಟ್ಟಿರುವ ನನ್ನನ್ನು ರಕ್ಷಣೆ ಮಾಡಬೇಕು. ಕೂಡಲೇ ಬಂದರೆ ಅಪರಾಧಿಗಳು ಇಲ್ಲಿಯೇ ಸಿಕ್ಕುವರು. ಜರೂರು! ಜರೂರು!

ಆಪದ್ಗ್ರಸ್ತೆ—ಗಿರಿಜಾ
ಬೆಳಗ್ಗೆ ಸುಮಾರು ೬ ಗಂಟೆ.”

ಪುಸ್ತಕ ಪೆನ್ಸಿಲುಗಳನ್ನು ಮೊದಲಿನಂತಿಟ್ಟು, ಆ ಪತ್ರವನ್ನು ಮಡಚಿ ಕೊಂಡು, ಕಿಟಕಿಯ ಬಳಿಯಲ್ಲಿ ನಿಂತು ಬೀದಿಯನ್ನು ನೋಡುತ್ತಾನಿಂತೆ. ಬೀದಿಯಲ್ಲಿ ನಡೆದಾಡುವ ಅನೇಕರಲ್ಲಿ, ನನ್ನ ಮನಸ್ಸು ಯೋಗ್ಯರೆಂದು ಒಪ್ಪಿದವರಿಗೆ ಆ ಕಾಗದವನ್ನು ಎಸೆಯಬೇಕೆಂಬುದು ನನ್ನ ಯೋಚನೆ.

ಅದೃಷ್ಟವಶಾತ್ ಒಬ್ಬ ಪೋಲೀಸಿನವನೇ ಇತ್ತ ಬರುತ್ತಿದ್ದ. ಅವನು ಆ ಕಿಟಕಿಯ ಬದಿಗೆ ಬರುತ್ತಲೇ ನಾನು ಒಂದೇಒಂದು ಚಿಟಿಕೆ ಹಾಕಿದೆ. ಅವನು ತಲೆಯೆತ್ತಿ ನೋಡಿದ ಒಡನೆಯೇ ನಾನು ಆ ಪತ್ರವನ್ನು ಕೆಳಗೆಸೆದೆ. ಅವನು ಅದನ್ನು ಎತ್ತಿಕೊಂಡು ಓದಿ, ಆ ಮನೆಯನ್ನು ಗುರುತಿಟ್ಟು ನೋಡಿ ಕೊಂಡು, ನನಗೊಂದು ಅಭಯಸಂಜ್ಞೆಯನ್ನು ತೋರಿಸಿ, ಬೇಗಬೇಗನೇ ಆ ಬೀದಿಯ ಕೊನೆಗೆ ಹೋದನು. ನಾನು ನೋಡುತ್ತಲೇ ಇದ್ದೆ. ಕೊಂಚ ಹೊತ್ತಿನಲ್ಲಿ ಇನ್ನೊಬ್ಬ ಕಾನ್ಸ್ಟೇಬಲನು ಇತ್ತ ಬಂದು, ಈ ಮನೆಯನ್ನೆ ಗಮನಿಸುತ್ತ, ಅತ್ತಿತ್ತ ತಿರುಗಾಡತೊಡಗಿದನು. ಹಾ ! ನಾನು ದೇವರನ್ನು ನೆನೆದೆ.

೧೮

ಸ್ವಲ್ಪ ಹೊತ್ತು ಸರಿಯಿತು. ಸೂರ್ಯನು ಮೂಡಿದನು. ಎಳೆಬಿಸಿಲು ಬೆಳೆಯುತ್ತಿದ್ದಿತು. ಇನ್ನೂ ನಡುಕೋಣೆಯೊಳಗೆ ಮಲಗಿರುವ ಕಳ್ಳ ದಂಪತಿ ಗಳು ಎದ್ದ ಸುಳಿವಿಲ್ಲ. ಕೆಳಗಿನ ಬಿಡಾರದವರೆಲ್ಲ ಎದ್ದು ನಡೆದಾಡುತಿರುವ ಶಬ್ದವು ಕೇಳಬರುತ್ತಿದ್ದಿತು. ಆ ವೆಂಕಟೇಶನು ಎದ್ದು ಹೊರಟುಹೋಗುವ ಮುನ್ನ ನನ್ನ ಕೋಣೆಗೆ ಯಾರೂ ಬರಲಿಕ್ಕಿಲ್ಲ. ಆ ಪಾಪಿ ಏಳುವುದಕ್ಕಿಂತ ಮೊದಲೇ ಪೋಲೀಸರು ಬರಲಿ, ಎಂದು ನಾನು ದೇವರನ್ನು ಪ್ರಾರ್ಥಿಸು ತ್ತಿದ್ದೆನು.

ಆಗೋ, ಕಮಲೆಯ ತಾಯಿ ಎದ್ದಂತೆ ತೋರುತ್ತದೆ; ಅವಳು ಮಲಗಿದ ಕೋಣೆಗೆ ಬೇರೊಂದು ಬಾಗಿಲಿರಬೇಕು. ಅವಳು ಆ ಬಾಗಿಲಿನಿಂದ ಹೊರಗೆ ಹೋಗಿ ಕೆಲಸದವಳನ್ನು ಕುರಿತು ಐದುಕಪ್ಪು ಕಾಫೀ ತಯಾರಿಸಿ ತರುವಂತೆ ಹೇಳಿದ್ದು ಕೇಳಿಸಿತು.

ಆಗೊಂದು ಕಾರು ಮನೆಯ ಮುಂದೆ ಬಂದುನಿಂತ ಶಬ್ದ ! ನಾನು ಜಿಂಕೆಯಂತೆಯೇ ಹಾರಿ ಕಿಡಿಕಿಯಬಳಿಗೆ ಹೋಗಿ ಕೆಳಗೆ ಬಾಗಿ ನೋಡಿದೆ; ಕಾರೇನೋ ಮನೆಯ ಮುಂದೆಯೇ ನಿಂತಿತ್ತು. ಮಾಡಿನ ಬದಿಯೊಂದು

ಅಡ್ಡವಾಗಿದ್ದುದರಿಂದ, ಕಾರಿನಿಂದ ಯಾರು ಇಳಿದು, ಮನೆಯೊಳಗೆ ಹೊಕ್ಕ ರೆಂಬುದು ನನಗೆ ಕಾಣಲಿಲ್ಲ ನಾನು ಕುತೂಹಲದಿಂದ ಬಾಗಿಲಬಳಿಗೆ ಓಡಿ ಕಿವಿಗೊಟ್ಟುಕೇಳಿದೆ. ಯಾರೋ ಮಾಡಿಯ ಮೇಲೆ ಹತ್ತಿಬಂದು ಬಿಟ್ಟಿದ್ದರು. "ಯಾರು ನೀವು? ಏನು? ಏನು?'' ಎಂದು ಕೇಳಿದಳು ಕಮಲೆಯ ತಾಯಿ

"ನನ್ನ ಗುರುತು ಸಿಕ್ಕಿಲ್ಲವೇನಮ್ಮ? ಹಿಂದೊಮ್ಮೆ ನಾನಿಲ್ಲಿಗೆ ಬಂದಿದ್ದೆ. ಕೆ. ವೆಂಕಟೇಶ್ ಎಂಬವನು ಇಲ್ಲಿ ಕೆಳಗೆ ಬಿಡಾರ ವಿದ್ದನಲ್ಲಾ? ಈಗಿಲ್ಲವೇ ಇಲ್ಲಿ? ಎಲ್ಲಿದ್ದಾನೆ?"

ಹಾ! ನನ್ನತಂದೆ! ನನ್ನತಂದೆ! ನನ್ನತಂದೆಯ ಸ್ವರ! ನನ್ನತಂದೆ– ನನ್ನ ಪ್ರೀತಿಯ ತಂದೆ ನನ್ನನ್ನು ಹುಡುಕಿಕೊಂಡೇ ಬಂದಿದ್ದಾರೇನು? ಅವರಿಗೆ ಈ ದುಷ್ಟಪುತ್ರಿಯ ಮೇಲೆ ಸಿಟ್ಟಿಲ್ಲವೆ?

ಆಗೊ, ಕಮಲೆಯತಾಯಿ ತುಸು ತಬ್ಬಿಬ್ಬಾದವಳಂತೆ ಹೇಳುತ್ತಿದ್ದಾಳೆ,— "ಓಹೊ! ನೀವೆ? ವೆಕಂಟೇಶರೆ? ಆಹ! ಅವರು........ ಈಗ........" ಏನು ಹೇಳಬೇಕೆಂದು ಅವಳಿಗೆ ತೋರಲಿಲ್ಲವಾಗಿರಬೇಕು.

"ಯಾಕೆ? ವೆಂಕಟೇಶ ಗೊತ್ತಿಲ್ಲವೆ?"– ನನ್ನತಂದೆ ಪುನಃ ಕೇಳಿದರು.

ನನಗೆ "ಅಪ್ಪಾ!" ಎಂದು ಕೂಗಿಕೊಳ್ಳಬೇಕೆಂಬ ಹಾಗಾಯಿತು. ತಡೆದುಕೊಂಡೆ.

"ಅವರೀಗ ಎಲ್ಲಿಯೋ ಬೇರೆ ಬಿಡಾರಕ್ಕೆ ಹೋದಹಾಗಿದೆ." –ಕಮಲೆಯ ತಾಯಿಯೆಂದಳು.

"ಓಹೊ! ಹದಿನೈದು ದಿನಗಳ ಕೆಳಗೆ ಅವನು ಹಾಕಿದ ಕಾಗದದಲ್ಲಿ ಇದೇ ವಿಳಾಸ ಕೊಟ್ಟಿದ್ದನಲ್ಲ? ಅವನೀಗ ಹೆಂಡತಿಯನ್ನು ಕೂಡಾ ಕರಕೊಂಡು ಬಂದ್ದಿದ್ದಾನೆ. ಎಲ್ಲಿ ಬಿಡಾರ ಮಾಡಿದ್ದಾನೆಂದು ನಿಮಗೆ ಗೊತ್ತಿಲ್ಲವೆ?"– ನನ್ನತಂದೆ ಕೇಳಿದರು.

"ಗೊತ್ತಿಲ್ಲ. ನೀವು ಅವರ ಕಂಪೆನಿಗೆ ಹೋಗಿ ವಿಚಾರಿಸಿ."

"ಕಂಪೆನಿ ಎಲ್ಲಿದೆ?"

ಆಗ ಕೆಳಗೆ ಬೀದಿಯಲ್ಲಿ ಇನ್ನೊಂದು ಮೋಟಾರು ಓಡಿ ಬಂದುನಿಂತ ಸದ್ದಾಯಿತು. ಕಿಟಕಿಯ ಬಳಿಗೋಡಿನೋಡಿದೆ. ಒಬ್ಬರು ಪೋಲೀಸ್ ಇನ್ಸ್‌ಪೆಕ್ಟರರೂ, ಮೂವರು ಪೋಲೀಸರೂ ಕಾರಿನಿಂದಿಳಿದು ಆ ಮನೆಯೊಳಗೆ

ನುಗ್ಗಿದರು. ಧಡ್ ಭಡ್ ಬೂಟಿನ ಸಪ್ಪಳದೊಂದಿಗೆ ಅವರು ಆ ಉಪ್ಪರಿಗೆಯ ಮೇಲಕ್ಕೂ ಹತ್ತಿಬಂದರು.

"ಯಾರು ? ಯಾರು ? ಯಾರು ? ಏನು ? ಏನು ?–" ಅವಸರವಸರದಿಂದ ಕಮಲೆಯ ತಾಯಿ ತಡಬಡಿಸಿದಳು.

"ನಿಮ್ಮಮನೆಯೋ ಇದು "– ಪೋಲೀಸ್ ಇನ್ಸ್ಪೆಕ್ಟರರ ಅಧಿಕಾರ ಪ್ರಶ್ನೆಯಂತ್ತಿತ್ತು.

"ಹೌದು. ಯಾಕೆ ?...." ಕಮಲೆಯ ತಾಯಿಯ ಮಾರ್ನುಡಿ

"ಹಾಗಾದರೆ ಬಾಗಿಲುತೆರೆಯಿರಿ. ಶೋಧಿಸಬೇಕಾಗಿದೆ."

"ಏಕೆ ? ನಾವೇನು ಮಾಡಿದ್ದೇವೆ ?"

"ಎಲ್ಲವೂ ತಿಳಿಯುವದು. ಯಾರಿದ್ದಾರೆ ಈ ಕೋಣೆಯೊಳಗೆ ? "– ನಡುಗೋಣೆಯನ್ನು ಕುರಿತು ಪೋಲೀಸ್ ಇನ್ಸ್ಪೆಕ್ಟರು ಕೇಳಿರಬೇಕು.

"ಕಮಲೆಯ ತಾಯಿ "ನನ್ನಮಗಳು ಮಲಗಿದ್ದಾಳೆ" ಎಂದಂದು ನನ್ನತಂದೆಗೆ– "ಸ್ವಾಮಿ, ನೀವು ಹೋಗಬಹುದಲ್ಲಾ ? ಕಂಪೆನಿಗೆ ಹೋಗಿ ವಿಚಾರಿಸಿ" ಎಂದಳು.

"ಯಾರಿವರು ?" ಪೋಲೀಸ್ ಇನ್ಸ್ಪೆಕ್ಟರ ಪ್ರಶ್ನೆ.

"ಯಾರನ್ನೊ ವಿಚಾರಿಸಿ ಕೊಂಡು ಬಂದವರು. ಹೋಗಿಸ್ವಾಮಿ!"

ಆಗ ನನ್ನ ತಂದೆಯೆಂದರುಃ— "ನಮ್ಮವನೊಬ್ಬ ಇಲ್ಲಿ ಬಿಡಾರವಿದ್ದ. ಅವನನ್ನು ವಿಚಾರಿಸಿಕೊಂಡು ಬಂದೆವು."

"ಓಹೊ" ಎಂದು ಪೋಲೀಸ್ ಇನ್ಸ್ಪೆಕ್ಟರು ತುಸು ಏರಿಕೆಯ ಸ್ವರದಲ್ಲಿ– "ಏನಮ್ಮಾ, ಬಾಗಿಲು ತೆರೆಯಿರೆಂದರೆ ಸುಮ್ಮನೆ ಹೊತ್ತು ಕಳೆಯುತ್ತೀರಿ ? ಇವರು ಹೋದರೇನೇ ಬಾಗಿಲು ತೆರೆಯಿಸುವಿರಷ್ಟೇನೊ ?– ಓಯ್, ನೀವು ನಿಲ್ಲಿರಯ್ಯಾ ಇಲ್ಲಿಯೇ. ಇಲ್ಲಿ ಕಾಣುವವೋಸತನಕ್ಕೆ ತಾವೂ ಸಾಕ್ಷಿಗಳಾಗಬೇಕಾದೀತು.— ಹೊ! ತಾವಾರು ? ಎಲ್ಲಿಯೋ ಕಂಡಂತಿದೆ! ಮಿಸ್ಟರ್ ವೇದಾದ್ರಿಸದಾಶಿವಂರಲ್ಲವೇ ತಾವು ?"

ಏನೇನು! ಸದಾಶಿವಂಕೂಡಾ ಬಂದಿದಾರೆಯೇ ತಂದೆಯ ಜತೆಯಲ್ಲಿ! ಅಗೋ ಅವರ ಸ್ವರ!

"ಗುಡ್ಮಾರ್ನಿಂಗ್ ಸರ್ ? ನಿಜ. ನಾನೇ ಸದಾಶಿವಂ. ಇವರು ನಮ್ಮವರೇ!"

"ತುಂಬ ಒಳ್ಳೆಯದಾಯಿತು ಮಿಸ್ಟರ್ ಸದಾಶಿವಂ ಅಗತ್ಯವಾಗಿ ಕೊಂಚ ನಿಲ್ಲಬೇಕು ತಾವು"— ಎಂದಂದು ಇನ್ಸ್‌ಪೆಕ್ಟರು ತುಸುಕೋಪದಿಂದ— "ಏನಮ್ಮ, ಇನ್ನೂ ಪಿಳಿಪಿಳಿ ನೋಡುತ್ತಿರುವಿ? ನಾವಿಷ್ಟು ಗಟ್ಟಿಯಾಗಿ ಮಾತಾಡುತ್ತಿದ್ದರೂ ಒಳಗೆ ಮಲಗಿರುವವರಿಗೆ ಕೇಳುವುದಿಲ್ಲವೆಂದರೇನು? ಇದೇನು ಮಲಗುವ ಸಮಯವೆ? ಬೆಳಗಾಗಿ ಇಷ್ಟು ಹೊತ್ತಾಯಿತು! ಏಳಿರಯ್ಯಾ! ಯಾರೊಳಗೆ?—" ಬೂಟ್ಸುಕಾಲಿನಿಂದ ಧಡಧಡನೆ ಬಾಗಿಲನ್ನೊದೆದರು.

ನಡುಗೋಣೆಯೊಳಗೆ ಗಡಿಬಿಡಿ ಸುರುವಾಯಿತು. "ಯಾರು? ಯಾರು? ಎಂದು 'ಅವನು' ಅರಚಿದನು. ನಿದ್ರೆಯ ವೈಮನಸ್ಯಿತವೂ ಮಘುವಿನ ಮಂಕೂ ಕಲೆತಿತ್ತು ಆ ಸ್ವರದಲ್ಲಿ ಬಳೆಗಳ ಕಣಕಣಾಟವೂ ಕೇಳಿಸಿತು. ಅನಂತರ ಬಾಗಿಲು ತೆರೆದ ಸದ್ದು.

ಕೂಡಲೇ ನನ್ನ ತಂದೆಯು ಆಶ್ಚರ್ಯದ ಮಾತು— "ಅರೇ ವೆಂಕಟೇಶ್! ಇಲ್ಲಿಯೇ ಇದ್ದೀಯಲ್ಲ! ಇವಳು ಇಲ್ಲವೆಂದಳಲ್ಲಾ! ಎಲ್ಲಿ? ಗಿರಿಜ ಎಲ್ಲಿ?"

"ಓ! ಮಾವ! ನೀ–ನೀವು ಇಲ್ಲಿ– ಪೋ–ಪೋಲೀಸ್– ಯಾಕೆ?– ಯಾಕೆ? ಗಿ–ಗಿರಿಜ ಬಿ–ಬಿಡಾರದಲ್ಲಿ" ವೆಂಕಟೇಶನ ತಡವರಿಕೆಯ ತಬ್ಬಿಬ್ಬಾದ ನುಡಿಯಿದು.

"ಮತ್ತೆ ನೀನಿಲ್ಲಿ ಯಾಕೊ? ಇಲ್ಲಾಂತ ಇವಳು ಸುಳ್ಳು ಹೇಳಿದಳೇಕೊ?" ನನ್ನ ತಂದೆಯು ಪ್ರಶ್ನೆ.

ಇನ್ನು ನನಗೆ ತಡೆಯಲಾಗಲಿಲ್ಲ. "ಅಪ್ಪಾ! ಅಪ್ಪಾ! ನಾನಿಲ್ಲಿ ಈ ಕೋಣೆಯೊಳಗಿದ್ದೇನೆ!" ಎಂದು ಕೂಗಿದೆ.

"ಗಿರಿಜಾ! ಗಿರಿಜಾ!" ಎಂದು ತಂದೆಯು ಪ್ರತಿಧ್ವನಿ.

"ಅಪ್ಪಾ! ಅಪ್ಪಾ!" ಎಂದು ನನ್ನ ಪುನರ್ಧ್ವನಿ.

ಇನ್ಸ್‌ಪೆಕ್ಟರರ ಬೂಟ್ಸಿನ ಸಪ್ಪಳವು ನಾನಿರುವ ಕೋಣೆಯ ಬಾಗಿಲ ಬಳಿಗೆ ಬಂತು. "ಓಹೋ! ಬೀಗ ಹಾಕಿದೆ ಈ ಕೋಣೆಗೆ! ಎಲ್ಲಿ ಬೀಗದ ಕೈ?" ಎಂದು ಕೇಳಿದರು ಇನ್ಸ್‌ಪೆಕ್ಟರು.

ಬೀಗ ತೆಗೆದು ಬಾಗಿಲು ತೆರೆಯಲ್ಪಟ್ಟಿತು. ಅಲ್ಲಿ ನಿಂತಿದ್ದೆಲ್ಲರನ್ನೂ ನೋಡಿದೆ. ನನ್ನ ತಂದೆ, ಸದಾಶಿವಂ, ಗೆಳತಿ ಮಾಲತಿ, ಇನ್ಸ್‌ಪೆಕ್ಟರರು,

ಪೋಲೀಸರು! ಇವರೆಡೆಯಲ್ಲಿ ಹುಚ್ಚುಪೆಚ್ಚಾಗಿ ನಿಂತ ಕಮಲೆ, ಕಮಲೆಯ ತಾಯಿ, ಮತ್ತು ಅವನು! — ವೆಂಕಟೇಶ!

ಮರುನಿಮಿಷದಲ್ಲಿ ನಾನು ತಂದೆಯ ಕಾಲಡಿಯಲ್ಲಿ. ನನ್ನ ಕಣ್ಣೀರುಕ್ಕಿ ಸೂಸಿತ್ತು. ಗದ್ಗದ ಸ್ವರದಿಂದ— "ಅಪ್ಪ! ನಿಮ್ಮೊಡನೆ ಹೇಳದೆ ನಿಮ್ಮ ಮಾತು ಕೇಳದೆ ಹೊರಟು ಬಂದೆ! ನನ್ನ ಅಪರಾಧಕ್ಕೆ ತಕ್ಕ ಪ್ರಾಯಶ್ಚಿತ್ತ ವಾಯಿತು ನನ್ನನ್ನು ಕ್ಷಮಿಸಿರಿ!"

ತಂದೆ ನನ್ನ ತೋಳನ್ನು ಹಿಡಿದೆತ್ತುತ್ತಾ— "ನನಗೆ ಗೊತ್ತು ಕಂದಾ ಹೀಗೇನಾದರೂ ಆದೀತೂಂತ. ಸದ್ಯ ಚೆನ್ನಾಗಿದ್ದೀಯಷ್ಟೆ? ಏನೂ ಆಗಿಲ್ಲ ತಾನೆ?" ಎಂದು ವಿಚಾರಿಸಿದರು.

"ಇಲ್ಲ ಅಪ್ಪಾ ಏನೂ ಆಗಿಲ್ಲ. ದೇವರು ನನ್ನನ್ನು ಕಠಿನವಾದ ವಿಪತ್ತಿನಿಂದ ಪಾರು ಮಾಡಿದನು. ನನ್ನ ಮೊರೆಯುನ್ನು ಲಾಲಿಸಿ ಬೇಗನೇ ಬಂದೊದಗಿದ ಈ ಪೋಲೀಸ್ ಅಧಿಕಾರಿಗಳನ್ನು ನಾನು ಮನಃ ಪೂರ್ವಕವಾಗಿ ಅಭಿವಂದಿಸುತ್ತೇನೆ" ಎಂದಂದು ನಾನು ಪೋಲೀಸ್ ಇನ್ಸ್‌ಪೆಕ್ಟರರಿಗೆ ಕೈ ಮುಗಿದೆನು.

ಇನ್ಸ್‌ಪೆಕ್ಟರು ನನಗೆ ಪ್ರತ್ಯಭಿವಾದನೆಯನ್ನು ಮಾಡಿ, "ಅದಿರಲಿ, ತಂಗಿ, ನಿಮಗೆ ಈ ಆಪತ್ತನ್ನುಂಟುಮಾಡಿದವರನ್ನು ಮೊದಲು ತೋರಿಸಿರಿ. ಮತ್ತೇನೋ ಕಳವಿನ ವಸ್ತು ಎಂದೂ ಸೂಚನೆಮಾಡಿದ್ದೀರಲ್ಲ?" ಎಂದರು.

"ಅದೋ ಅವನು!—" ಬಾಗಿಲಲ್ಲಿ ಅಡ್ಡವಾಗಿ ನಿಂತಿರುವ ಪೋಲೀಸರನ್ನು ದಾಟಿಕೊಂಡು ಹೋಗಲು ಸಾಧ್ಯವಿಲ್ಲದೆ ಇಳಿ ಮೊಗನಾಗಿ ಬೆಪ್ಪುಕಟ್ಟಿ ನಿಂತಿರುವ ವೆಂಕಟೇಶನನ್ನು ತೋರಿಸುತ್ತ ನಾನಂದೆ:— "— ಅವನು! ಆ ಚಾಂಡಾಲನನ್ನು ಮೊದಲು ಅರೆಸ್ಟ್ ಮಾಡಿರಿ! ಅವನು ನನ್ನ ಗಂಡನೆನಿಸಿರುತ್ತಾನೆ. ನಾನು ಪತಿಯೆಂಬ ನಂಬುಗೆಯಿಂದ ಅವನೊಂದಿಗೆ ತುಟ್ಟತುದಿಯ ವರೆಗೂ ಸಾಗಿ ನೋಡಿದ್ದಾಯಿತು. ನನ್ನ ಹೆತ್ತ ತಂದೆಯ ಮಾತನ್ನು ಕೂಡಾ ಮೀರಿ, ನನ್ನ ಕೆಲಸಕ್ಕೆಕೂಡಾ ರಾಜೀನಾಮೆ ಕೊಟ್ಟು, ಪತಿಯೇ ಗತಿಯೆಂಬ ಆರ್ಯನಾರಿಯ ಧರ್ಮದಂತೆ ಈತನ ಬೆಂಬತ್ತಿಬಂದೆ. ಇವನು ನನ್ನನ್ನು ಮಧುರವಾದ ಮಾತಿನಿಂದ ಮೋಸಪಡಿಸಿ, ಇನ್ನೊಬ್ಬರಿಗೆ ಮಾರುವ ಹೀನಕಾರ್ಯಕ್ಕೆಳಸಿದ್ದಾನೆ. ಆ ಸಂಬಂಧವಾಗಿ ಇವನಿಗೆ ಎಷ್ಟೋ ನೋಟುಗಳು ಸಿಕ್ಕಿರುತ್ತವೆ. ಅದರಲ್ಲಿ ಇನ್ನೂರು ರೂಪಾಯಿಯನ್ನು ಕಳೆದ ರಾತ್ರಿ

ಇವನು ಈ ಮನೆಯವರಿಗೆ ಕೊಟ್ಟಿದ್ದಾನೆ ಇಷ್ಟೇ ಅಲ್ಲದೆ, ಇವನು ಅಂದೊಮ್ಮೆ ನನ್ನ ಕೊರಳಿನಿಂದ ಅಪಹರಿಸಿಕೊಂಡು ಬಂದ ಸರವು ಕೂಡಾ ಇದೋ ಈ ಕಮಲೆ ಎಂಬ ಹೆಂಗುಸಿನ ಕೊರಳಲ್ಲಿದೆ ಇದರ ವಿಷಯವಾಗಿ ಅಂದೇ ನನ್ನ ತಂದೆ ಪೋಲೀಸ್ ಕಂಪ್ಲೇಂಟು ಕೊಟ್ಟಿದ್ದರು. ಆ ಮೇಲ ಏನೋ ಕ್ಷಮಾಬುದ್ಧಿಯಿಂದ ಸುಮ್ಮನಿದ್ದೆವು ಇನ್ನು ಇವನಿಗೂ ನನಗೂ ಏನೂ ಸಂಬಂಧವಿಲ್ಲ—'' ಎಂದು ಹೇಳಿ ನನ್ನ ಹೃದಯವನ್ನು ಹಗುರ ಮಾಡಿಕೊಂಡೆನು.

"ಅಯ್ಯಯ್ಯೋ! ಘಾತಕಿಯೇ! ನಿನಗೆ ಆಪತ್ಕಾಲದಲ್ಲಿ ನಾವು ಸಹಾಯ ಮಾಡಿದ್ದಕ್ಕೆ ನಮ್ಮ ಮೇಲೆ ಇಂಥಾ ಅಭಾಂಡವಾದ ಆರೋಪವನ್ನು ಹೊರಿಸುವಿಯಾ?" ಎಂದು ಕಮಲೆಯ ತಾಯಿ ಬಡೆದುಕೊಂಡಳು.

ಇನ್ಸ್‌ಪೆಕ್ಟರು ಹೆದರಿಸಿದರು—"ಸುಮ್ಮನಾಗಿರಿನ್ನು. ನಿಮ್ಮ ಹೇಳಿಕೆಗಳನ್ನೆಲ್ಲಾ ವಿಚಾರಣೆಯಲ್ಲಿ ಹೇಳಿಕೊಳ್ಳಿರಿ ಈಗ ನೀವು ಮೂವರನ್ನೂ ಅರೆಸ್ಟ್ ಮಾಡಬೇಕಾಗಿದೆ."

"ಅಯ್ಯೋ! ಹೀಗೂ ಅನ್ಯಾಯವೆ? ನಾವೇನುಮಾಡಿದೆವು?'' ಎಂದು ತಾಯಿ-ಮಗಳಿಬ್ಬರೂ ಚೀರಿದರು

"ಮನೆಯೊಡತಿಯಾದ ನೀನು, ಕುಲೀನ ಹೆಂಗುಸೊಬ್ಬಳನ್ನು ಕೋಣೆಯೊಳಗೆ ಬೀಗ ಹಾಕಿ ನಿರ್ಬಂಧಿಸಿದ್ದೀ! ನಿನ್ನ ಮಗಳು ಕದ್ದಿದ್ದ ಆಭರಣವನ್ನು ಹಾಕಿಕೊಂಡಿದ್ದಾಳೆ ಇನ್ನು ಈ ಮಹಾರಾಯನ ಅಪರಾಧವು ಪ್ರತ್ಯಕ್ಷವೇ ಆಗಿದೆ.— ಧರ್ಮಪತ್ನಿಯನ್ನು ಯಾವ ಗತಿಗೆ ತಂದಿಕ್ಕಿದ್ದಾರೆ!" ಎಂದಂದು ಇನ್ಸ್‌ಪೆಕ್ಟರು ಪೋಲೀಸರಿಗೆ ಸನ್ನೆಗಾಣಿಸಿದರು ಕೂಡಲೇ ಪೋಲೀಸರು ವೆಂಕಟೇಶನ ಕೈಗೆ ಕೋಳಹಾಕಿದರು. ಕಮಲೆಯ ಕೊರಳಿನಲ್ಲಿರುವ ಆ ಬೋರಿಸರವು ತೆಗೆಯಿಸಲ್ಪಟ್ಟಿತು ಅದರಲ್ಲಿ ನನ್ನ ತಂದೆಯ ಹೆಸರಿತ್ತು. ನಾನೂ ತಂದೆಯುವರೂ ಅದು ನಮ್ಮದೇ ಪೆಂಡೆಂಟು ಗುರುತು ಹೇಳಿದೆವು ಆ ಮೇಲೆ ಇನ್ಸ್‌ಪೆಕ್ಟರು ಮನೆಯನ್ನೆಲ್ಲಾ ಶೋಧಮಾಡುವಾಗ ಹತ್ತು ಹತ್ತು ರೂಪಾಯಿ ನೋಟುಗಳ ಒಂದು ಕಟ್ಟು ದೊರೆಯಿತು ಅದರಲ್ಲಿ ಮುನ್ನೂರು ರೂಪಾಯಿಗಳಿದ್ದುವು ವೆಂಕಟೇಶನ ಜೇಬಿನಲ್ಲಿ ಇನ್ನೊಂದು ರೂಪಾಯಿಯ ಕಟ್ಟು ದೊರೆಯಿತು. ಅವನ್ನೂ ನನ್ನ ಸರವನ್ನೂ ಪೋಲೀಸ್ ಇನ್ಸ್‌ಪೆಕ್ಟರರು ತಮ್ಮ ವಶಪಡಿಸಿಕೊಂಡರು ಅವು ವಿಚಾರಣೆಗೆ ಬೇಕಾ

ಗುವ ಸಾಕ್ಷಿಗಳಷ್ಟೆ ?

ಈ ಮಧ್ಯದಲ್ಲಿ ನಾನೂ ಮಾಲತಿಯೂ ಪರಸ್ಪರ ತೆಕ್ಕೆಬಿದ್ದುಕೊಂಡು ಜಿಟ್ಟಿದ್ದೆವು. ಬಳಿಕ ಅಲ್ಲಿಂದ ನಾವೆಲ್ಲರೂ ಸದಾಶಿವಂರವರ ಕಾರಿನಲ್ಲಿಯೇ ಹೊರಟೆವೆಂದು ಹೇಳಬೇಡವಷ್ಟೆ ? ಪೋಲೀಸ ಇನ್ಸ್‌ಪೆಕ್ಟರು ಆ ಮೂವರು ಕೈದಿಗಳನ್ನೂ ಸಾಗಿಸಿಕೊಂಡ್, ಧನದಾಸ ಮುದಲಿಯಾರನ ಮನೆಗೇ ಸಾಗಿದರು.

೯

ತಂದೆ ಆ ಪ್ರಕಾರ ಅಲ್ಲಿಗೆ ಒದಗಿಬರುವರೆಂದು ನಾನು ಕೊಂಚಕೂಡಾ ಊಹಿಸಿರಲಿಲ್ಲ. ಮನೆಯಲ್ಲಿ ನಾನು ಪತ್ರವನ್ನು ಬರೆದಿಟ್ಟು ಹೊರಟುದನ್ನು ತಿಳಿದು ನನ್ನ ತಂದೆಗೆ ಅಪಾರವಾದ ಸಿಟ್ಟು ಬಂತಂತೆ. "ಅವಳು ನನ್ನ ಮಗಳೇ ಅಲ್ಲ; ಪಿತೃದ್ರೋಹಿ" ಎಂದು ಬಾಯಿಗೆ ಬಂದ ಹಾಗೆಲ್ಲಾ ಬೈದರಂತೆ. ಅವಳನ್ನು ನಂಬಿ ದೊಡ್ಡವರ ಸಂಬಂಧಕ್ಕೆ ಇಷ್ಟೆಲ್ಲಾ ಮುಂದು ವರಿದಿರುವಾಗ, ನಡುವೇ ಕುತ್ತಿಗೆ ಕೊಯ್ದುಹಾಗೆ ಜಾರಿಕೊಂಡಳಲ್ಲ ? ಇನ್ನು ಸದಾಶಿವಂರಿಗೆ ಈ ವಿಚಾರವನ್ನು ಹೇಗೆ ಹೇಳಲಿ ? ಈ ಮುಖ ಹೇಗೆ ತೋರಿಸಲಿ ?—" ಎಂದು ಮುಂತಾಗಿ ತುಂಬಾ ಸಂತಾಪಪಟ್ಟರಂತೆ. "........ ಇಷ್ಟು ಮಾಡಿದ್ದಲ್ಲದೆ ಈ ಮದುವೆ ಸರೋಜೆಗಾಗಲಿ ಎಂದು ಬರೆದಿದ್ದಾಳಲ್ಲ ! ಎಷ್ಟು ದುರಹಂಕಾರ !" ಎಂದು ಚೀರಿದರಂತೆ. ಯಾರೇನು ಸಮಾಧಾನ ಮಾಡಿದರೂ ತಂದೆಯವರ ಸಿಟ್ಟು ಇಳಿಯಲೇ ಇಲ್ಲವಂತೆ. ಹೊರಗೆ ಮುಖವನ್ನು ತೋರಿಸಲಿಕ್ಕೇ ನಾಚಿಕೊಂಡು, ಎಲ್ಲಿಗೂ ಹೋಗದೆ ಮನೆಯೊಳಗೇ ಕುಳಿತುಬಿಟ್ಟರಂತೆ. ಸದಾಶಿವಂರಿಗೂ ಈ ಸಂಗತಿ ತಿಳಿಸಲು ಅವರಿಂದಾಗಲಿಲ್ಲ. ಸದಾಶಿವಂರೇ ಬಂದು ಅವರನ್ನು ಸಮಾಧಾನಪಡಿಸದಿರುತ್ತಿದ್ದರೆ, ಎಂದಿಗೂ ಅವರ ಸಿಟ್ಟು ಇಳಿಯುವಂತಹದಾಗಿರಲಿಲ್ಲ.

ಆದರೆ ನಾನು ಮಾಲತಿಗೆ ಬರೆದ ಪತ್ರದಿಂದ ಸದಾಶಿವಂರಿಗೂ ಸಂಗತಿ ಗೊತ್ತಾಗಿದ್ದಿತಷ್ಟೆ ? ಅವರಿಗೂ ಅತ್ಯಾಶ್ಚರ್ಯವಾಯಿತಂತೆ. ಎರಡು ಮೂರು ದಿವಸ ಅದೇ ಚಿಂತೆಯಿಂದ ಸರಿಯಾದ ಊಟ–ತಿಂಡಿ ಕೂಡ ತೆಗೆದುಕೊಳ್ಳಲಿಲ್ಲವಂತೆ ಸದಾಶಿವಂ. ಈ ವ್ಯಸನದಲ್ಲಿ ಸರೋಜೆಯೂ ೧೫ ದಿನ ಶಾಲೆಗೆ ರಜೆ ಬರೆದುಕೊಂಡಳಂತೆ. ಕಡೆಗೊಮ್ಮೆ ಈ ಸಂಗತಿಯನ್ನು ಕೂಲಂಕಷವಾಗಿ ಅರಿತ್ತುಕೊಳ್ಳಬೇಕೆಂದುಕೊಂಡು ವೊನ್ನೆ ಸದಾಶಿವಂರೇ ಹೋಗಿ ನನ್ನ

ತಂದೆಯನ್ನು ಮಾತಾಡಿಸಿದರಂತೆ. ಈ ನಿಶ್ಚಿತ ವಿವಾಹದ ಆಕಸ್ಮಿಕವಾದ ಮುರಿಯುವಿಕೆಯಿಂದ ಸದಾಶಿವಂ ಎಷ್ಟುಕೋಪದಲ್ಲಿರುವರೋ ಎಂದಿದ್ದ ತಂದೆಗೆ, ಸದಾಶಿವಂರ ಸಮಾಧಾನವನ್ನು ನೋಡಿ ಮೋಸಹೋದಂತೆ ಆಶ್ಚರ್ಯವಾಯಿತಂತೆ

ಆಗ ಸದಾಶಿವಂ ತಂದೆಯವರ ಕೋಪ ಸಂತಾಪಗಳನ್ನು ಶಾಂತ ಪಡಿಸುತ್ತ,– "ಗಂಡನ ಮೇಲೆ ಮನಸ್ಸಿಟ್ಟುಕೊಂಡು, ಅವನೊಂದಿಗೆ ಹೋದ ಮಗಳ ಮೇಲೆ ಸಿಟ್ಟು ಮಾಡುವದು ನ್ಯಾಯವಲ್ಲ. ಅವಳೇನೂ ಅರಿಯದ ಹುಡುಗಿಯಲ್ಲ; ಒಳ್ಳೆಯ ಪ್ರೌಢೆ. ಏನೋ ನಮ್ಮ ಒತ್ತಾಯದಿಂದ ಚಂಚಲೆಯಾದ ಮಾತ್ರಕ್ಕೆ ಹೀಗೆಲ್ಲ ಕೋಪಿಸುವುದೇ ? ಈ ವಿಷಯದಲ್ಲಿ ನನ್ನದೂ ದೊಡ್ಡ ಅವಿಚಾರವಾಗಿದೆ. ಇರಲಿ. ಅವರೀಗ ಈ ಮದರಾಸಿನಲ್ಲಿಯೇ ಇದ್ದಾರಷ್ಟೆ ? ಹಾಗಿರುವಾಗ ಉತ್ತಮವಾದ ಟೀಚರ್ ಕೆಲಸಕ್ಕೆ ರಾಜೀನಾಮೆ ಕೊಡಬೇಕಾಗಿರಲಿಲ್ಲ. ಅವಳಷ್ಟಕ್ಕೆ ಶಾಲೆಗೆ ಬಂದು ಹೋಗಲು ಬಾಧಕವೇನಿದೆ ?" ಎಂದರಂತೆ ಸದಾಶಿವಂ. "ಅದೇತಂಟೆ ಬಂದದ್ದು ಮೊದಲಿನಿಂದಲೂ. ಆ ಮುಟ್ಠಾಳನಿಗೆ ಅವಳು ಅಂತಹ ಯಾವ ಕೆಲಸವನ್ನೂ ಮಾಡಕೂಡದಂತೆ. ಇದು ಅವನ ಹಟ. ಅದು ಅವನ ಮರ್ಯಾದೆಗೆ ಕಡಿಮೆಯಂತೆ!" ಎಂದು ತಿಳಿಸಿದರಂತೆ ತಂದೆ. "ಅದರಿಂದ ಅವರಿಗೇನು ಕಡಿಮೆಯೋ ನಾನೇ ಮಾತಾಡಿ ನೋಡುವೆನು. ನನ್ನನ್ನು ಅಲ್ಲಿಗೆ ಕರೆದೊಯ್ಯಿರಿ. ಪಾಪ, ನಿಮ್ಮಮಗಳು ತುಂಬ ಒಳ್ಳೆಯವಳು. ನಮಗೆಲ್ಲಾ ತನ್ನ ಮೇಲೆ ಸಿಟ್ಟಾಗಿರಬಹುದೆಂದು ಈಗ ತಿಳಿದಿದ್ದಾಳು. ನಾವು ಹೋಗಿ ಸಮಾಧಾನ ಪಡಿಸಲೇಬೇಕು. ಹಾಗೆಯೇ ಅವರ ಹೊಸ ಸಂಸಾರವನ್ನು ನಾವು ನೋಡಿದ ಹಾಗೂ ಆಯಿತು." ಎಂದೆಲ್ಲಾ ಬೋಧಿಸಿ ತಂದೆಯವರನ್ನು ಸಮಾಧಾನ ಪಡಿಸಿದರಂತೆ ಸದಾಶಿವಂರವರು.

ನಮ್ಮ ಬಿಡಾರವನ್ನು ಹುಡುಕಿಕೊಂಡು ಹೋಗಲು ಮುಂಜಾನೆಯ ವೇಳೆಯೇ ಒಳ್ಳೆಯ ಸಮಯವೆಂದು ತಂದೆಯವರು ಸೂಚಿಸಿದರಂತೆ. ಏಕೆಂದರೆ ಮುಂಜಾನೆಯ ವೇಳೆಯಲ್ಲಿಯಾದರೆ ವೆಂಕಟೇಶನು ಬಿಡಾರದಲ್ಲಿ ಸಿಕ್ಕುವನೆಂದು ಅವರ ಊಹೆ. ಅದರಂತೆಯೇ ಅಂದು ಮುಂಜಾನೆಯ ವೇಳೆಯಲ್ಲಿ ಮಾಲತಿಯೂ ಸದಾಶಿವಂರವರೂ ಕಾರನ್ನು ತೆಗೆದುಕೊಂಡು ತಿರುವಲ್ಲಿ ಕೋಣೆಗೆ ಹೋಗಿ, ನನ್ನ ತಂದೆಯನ್ನೂ ಕೂಡ್ರಿಸಿಕೊಂಡು, ತಂದೆಗೆ ತಿಳಿ

ದಿದ್ದ ಹಳೆಯ ವಿಳಾಸದ ಮನೆಗೆ ತಲುಪಿ ಅಲ್ಲಿ ನನ್ನನ್ನು ಸಂಧಿಸಿದರು. ಆಹ ! ಅವರು ಹೊರಟಮುಹೂರ್ತವು ಅದೆಷ್ಟು ದಿವ್ಯ ಮುಹೂರ್ತವಾಗಿತ್ತು !

ಆ ದಿನ ಬೆಳಿಗ್ಗೆ ಧನದಾಸ ಮುದಲಿಯರಿಗೆ ವರ್ತಮಾನ ಹೋಗುವುದರೊಳಗೆಯೇ, ಪೋಲಿಸ್ ಇನ್ಸ್ಪೆಕ್ಟರು ಅಲ್ಲಿಗೆ ಹೋಗಿ ಅವನನ್ನು ಕೈದು ಮಾಡಿ ಬಿಟ್ಟಿದ್ದರು. ಅವನ ಮನೆಯನ್ನು ಶೋಧಿಸಿದಾಗ ಅವನು ನನಗಾಗಿ ತರಿಸಿಟ್ಟಿದ್ದ ಶೀರೆಗಳೂ ಒಡವೆಗಳೂ ಅವನ ಮೇಜಿಯ ಮೇಲಿದ್ದ ನನ್ನ ಫೋಟೋವೂ ಅವನ ಅತ್ಯಾಚಾರಕ್ಕೆ ಸಾಕ್ಷಿಗಳಾಗಿ ದೊರೆತುವು.

ನಾನು ಪುನಃ ಪಾಠಶಾಲೆಗೆ ಸೇರಬೇಕೆಂದು ಸದಾಶಿವಂ ಮಾಲತಿಯರದು ತುಂಬ ಒತ್ತಾಯವಾಯಿತು. ನನಗಾದರೂ ಅದು ತುಂಬ ಇಷ್ಟವಾದುದೇ. ಅದಕ್ಕೆ ಸರೋಜಾ-ಸದಾಶಿವಂರ ವಿವಾಹವು ಈಡೇರದಿದ್ದರೆ ನನಗೆ ಯಾವ ಸಂತೋಷವೂ ಲಭಿಸುವಂತಿರಲಿಲ್ಲ. ಸದಾಶಿವಂರಾದರೋ ಇನ್ನಾದರೂ ನಾನು ಒಪ್ಪಿದರೆ ನನ್ನನ್ನೆ ವರಿಸಿಕೊಳ್ಳಲು ಹಿಂಜರಿಯುವದಿಲ್ಲೆಂಬ ಧೋರಣೆಯಲ್ಲಿಯೇ ಇದ್ದರು. ಆದರೆ ನಾನು ನಿಃಸಂಕೋಚವಾಗಿ ನನ್ನ ಸತ್ಯವಾದ ಹೃದ್ಗತವನ್ನು ಸ್ಪಷ್ಟವಾಗಿ ಸದಾಶಿವಂರವರಿಗೆ ತಿಳಿಯ ಪಡಿಸಿದೆನು. "ಸುಖವೇ ಇರಲಿ, ದುಃಖವೇ ಇರಲಿ; ಇನ್ನೆಂದಿಗೂ ನಾನೇ ಮದುವೆಗೆ ಸಿಕ್ಕಲಾರೆನು. ಒಮ್ಮೆ ಬಿದ್ದ ಮದುವೆಯ ಉರುಳು ಪೂರಾ ಹಾರಿ ಹೋದರೂ, ಅದರ ಸುಖದ ಅಥವಾ ದುಃಖದ ಕಲೆ ಈ ಜನ್ಮವಿರುವ ಪರ್ಯಂತ ಹೋಗುವಂತಹುದಲ್ಲ. ಇನ್ನು ನನ್ನ ಹೃದಯದಲ್ಲಿ ಹುಟ್ಟುವ ಪ್ರೇಮವು ಪ್ರಣಯ ಭಾವನೆಯನ್ನೆಂದೂ ತಾಳದು. ಅದೀಗ ಮಾತೃಭಾವಕ್ಕೆ ತಿರುಗಿ ಹಂಚಿ ಹರಿದಾಡಲಾರಂಭಿಸಿದೆ. ಮುದ್ದು ಬಾಲ-ಬಾಲಿಕೆಯರ ಕಡೆಗೆ ಒತ್ತರದಿಂದ ಸಾಗಲಾರಂಭಿಸಿದೆ. ಆ ಮೂಲಕವಾಗಿ ಅದು ಸಹೋದರಪ್ರೇಮವೆನಿಸೀತು ! ಅಖಿಲಸೇವೆಯಂತಹ ಒಂದು ದೇಶಸೇವೆಯೂ ಆದೀತು ! ಅನಂತರ ಅದು ವಿಶ್ವಪ್ರೇಮದ ಕಡೆಗೂ ಹೊರಳೀತಲ್ಲವೆ ? ಅದಕ್ಕಿಂತ ಹೆಚ್ಚಿನ ಭಾಗ್ಯವು ಇನ್ನೇನಿದೆ ? ಆದರೆ ನಿಮ್ಮ ಮೇಲೆ ಹುಟ್ಟಿ ಹೊಸ ಪ್ರಣಯಭಾವದಿಂದ ತುಂಬಿದ ಪ್ರೇಮವುಳ್ಳವಳಾದ ನನ್ನ ತಂಗಿ ಸರೋಜೆಯನ್ನೆ ನೀವು ಮದುವೆ ಮಾಡಿಕೊಳ್ಳುವುದಾದರೆ, ನೀವೂ ಅವಳೂ ಇಬ್ಬರೂ ಧನ್ಯರಾದೀರಿ." ಎಂದು ಮುಂತಾಗಿ ಹೇಳಿದೆನು.

"ಹಾಗೆಯೇ ಆಗಲಿ" ಎಂದರು ಸದಾಶಿವಂ.

ಈ ಮದುವೆಯು ನಿಶ್ಚಯವಾಗುತಿರುವಾಗಲೇ ಅತ್ತ ನ್ಯಾಯಾಸ್ಥಾನದಲ್ಲಿ ನನ್ನ ಸಂಬಂಧದ ಕೇಸಿನ ವಿಚಾರಣೆಯೂ ನಡೆಯಿತು. ವೆಂಕಟೇಶನ ಮೇಲೆ ಕಳವು-ಮೋಸ, ಮುಂತಾದ ಆರೊಪಗಳು ರುಜುವಾದವು ಅಬಲೆಯ ಮೇಲೆ ಅತ್ಯಾಚಾರಕ್ಕೆಳಸಿದ ಅಪರಾಧವು ಧನದಾಸ ಮುದಲೀಯ ಮೇಲೆಯೂ ಆರೋಹಿಸಿತು. ವೆಂಕಟೇಶನಿಗೆ ೯ ವರ್ಷ ಕಠಿನ ಶಿಕ್ಷೆಯೂ, ಧನದಾಸನಿಗೆ ೬ ತಿಂಗಳೂ, ಹೀಗೆ ತೀರ್ಪುದೊರೆಯಿತು. ಕಮಲೆಗೂ ಕಮಲೆಯ ತಾಯಿಗೂ ವಿಶೇಷವೇನೂ ಆಗಲಿಲ್ಲ. ಅವರ ಕುಲವೃತ್ತಿಯೇ ಅಂತಹುದಲ್ಲವೆ ? ನನಗೂ ಆಪತ್ತಿನಲ್ಲಿ ಆಸರೆಯಾದರೆಂಬ ಕೃತಜ್ಞತೆಯಿಂದ, ಅವರಿಗೆ ವಿರುದ್ಧವಾದ ಸಾಕ್ಷಿಯನ್ನು ನಾನೂ ಹೇಳಲಿಲ್ಲ.

ಅನಂತರ ಸರೋಜಾ-ಸದಾಶಿವಂರವರ ವಿವಾಹವು ಜರುಗಿತು. ನಾನೀಗ ಇದೇ ಶಾಲೆಯಲ್ಲಿ ಹಿಂದೀ ಪಾಠಕಿಯಾಗಿ, ಮಾತಾಪಿತೃಗಳಿಗೆ ಪ್ರೀತಿಯ ಸೇವಕಿಯಾಗಿ ತುಂಬ ನೆಮ್ಮದಿಯಾಗಿದ್ದೇನೆ

ನಮಸ್ತೆ !

" ಕನ್ನಡ ಚೆಲ್ನುಡಿ ಉನ್ನತಿಗೇರಲಿ. "

# ಪ್ರತಿಭಾ ಗ್ರಂಥಮಾಲೆ, ಧಾರವಾಡ

ಸಂಪಾದಕರು :

**ಭಾಲಚಂದ್ರ ಘಾಣೇಕರ**

ವಾರ್ಷಿಕ ಚಂದಾ :

ಅಂಚೆ ರಜಿಸ್ಟರ್ ವೆಚ್ಚ ಸೇರಿ ೬ ರೂ. ಮಾತ್ರ

ವರುಷಕ್ಕೆ ಎಂಟು ನೂರು ಪುಟದ ಸಾಹಿತ್ಯ.

ಚಂದಾದಾರರಿಗೆ ಜನೆವರಿಯಿಂದ ಜನೆವರಿವರೆಗೆ ಹೊರಡುವ

ಎಲ್ಲ ಪುಸ್ತಕಗಳನ್ನೂ ಕಳಿಸಲಾಗುವದು.

**೬ನೆಯ ವರುಷದ ಕಾದಂಬರಿಗಳು**

೧. ಪತಿ ! (ನವಗಿರಿನಂದ) ೨. ಪೂಜಾಫಲ (ನೆರಂಗ)

೩. ಮರೆಯಲಾರದ ಮಡದಿ (ಪಿ. ಯೋಗೀಶರಾಯ)

ಇವಲ್ಲದೆ

ಆನಂದಕಂದ, ಜೈನೇಂದ್ರಕುಮಾರ, ವಾಮನಮಲ್ಯ

ಮೊದಲಾದವರ ಕಾದಂಬರಿಗಳು.

ಮೇಲಿನ ವಿಳಾಸಕ್ಕೆ ಆರು ರೂ. M. O. ಮಾಡಿ

ಚಂದಾದಾರರಾಗಿರಿ .

ಪ್ರಕಾಶಕರು :
ಭಾಲಚಂದ್ರ ಘಾಣೇಕರ
ಪ್ರತಿಭಾ ಗ್ರಂಥಮಾಲೆ, ಧಾರವಾಡ.

ಮುದ್ರಕರು
ಜಿ. ಆರ್. ಪಂಡಿತ
ಕೇಳಕರ ಪ್ರೆಸ್, ಧಾರವಾಡ.